# ಬಳ್ಳಾರಿ ತತ್ತ್ವಗಳು.



...ಶಿಟ್ಟರ ಆರ್ಡರ್ ಮೇರೆಗೆ
... ಆರ್. ಕೃಷ್ಣಸ್ವಾಮಿ ಶೆಟ್ಟಿ,
ಬೆಲೆ 0–10–0.

  



# ಬಳ್ಳಾರಿ ತತ್ವಗಳು.



ಕಂ॥ ಪುರಹರನ ಸುತನಿಗೊಂದಿಸಿ।ಪರಮೇಷ್ಟಿಯ ಸತಿಗೆ ನಮಿಸಿ।ಗುರುಹಿರಿಯರನ್ನ।
ಸ್ಮರಿಸುತೆ ಮನದೊಳು ಕವಿಗಳ।ಚರಣಕೆರಗುವೆ ಶಾಮಾಖ್ಯಂ ನೊರದಿರ್ಪಂ॥

ತುಂಬಿದ್ಬಳ್ಳಾರಿಯೊಳಗೆ । ಕಂದ ಮಾಯವಾಯಿತೆಂದು ಕೂಸೇ ಹೋಯಿತೆಂದು ಮೋಸಮಾಡಿದನೇ ॥ ಅತ್ತೆ ಕರಿಬಸವ್ವ ಅಕ್ಕಿ ಪಾಯಸ ಮಾಡಿ।ಓದುವ ಶಾಲೆಗೆ ಪೋದ ಮಗನು ಬರಲಿಲ್ಲವೆಂದು ತಂದೆ ಕರಿಬಸಪ್ಪ ತಾಯಿ ಚನ್ನಬಸವ್ವ ಏಳವ್ವಾಯೆಂದು ಎಬ್ಬಿಸಿ ಅಂತ ತಡೆವುತಾ ॥ ಪಚೆ ಪದಕವು ತಾರೆ ಒಂಟೇ ಬಾವುಲಿ ತಾರೆ।ಶಿವದಾರ್ಕರಡಿಗೆ ತಾರೆ ಚಿನ್ನದುಡುದಾರ ತಾರೆ ಮಧುರೆ ರುಮಾಲು ತಾರೆ ಕುಡ್ತಿನಿ ಇಜಾರು ತಾರೆ।ಇಷ್ಟುಒಡವೆ ವಸ್ತ್ರವೆಲ್ಲ ವರುಷಕೊಮ್ಮೆ ಹೊಸಹಬ್ಬ । ಮಹರ್ನವಮಿ ಹಬ್ಬದಲ್ಲಿ ವಸ್ತ್ರ ಒಡವೆ ಹಾಕಿಕೊಂಡು ಓದೋ ಶಾಲೆಗೆ ಪೋಗಿ ಒದಿಸೋ ಉಪಾಧ್ಯಾಯರಿಲ್ಲವೆಂದು ಓದೋ ಹುಡುಗಾರ್ಕೂಡೆ । ಒಂಟೆ ಲೆಖ್ಖವ ಮಾಡಿ ಮನದೋಳ್ ಪಾಠವ ಮಾಡಿದಹಾಗ ॥೧॥ ಗದಗನೂರ್ ಚನ್ನಣ್ಣನು ಮಗನ ಮೋರೆಯ ನೋಡಿ ವಜ್ರವೈಡೂರ್ಯ ನೋಡಿ ಸೈರಿಸಲಾರದೆ।ಕಡಲೆ ಕೊಬ್ಬರಿಮಿಠಾಯಿ ತಂದು ಆ ಮಗನ ಮಡಲಲ್ಲಿ ಕಟ್ಟಿ। ತೂಗ ಮಗನ ಕೈಯ್ಯ ಪಿಡಿದು । ಕರಕೊಂಡು ಹೋಗುವಾಗ ಕಟುಗರ ಪೇಟಿಯಲ್ಲಿರುವೊ। ಖಾಜಿ ಇಮಾಂಸಾಬಿ ಮೇಲ್ ಮಹಡಿಯನೇರಿ ಬಂದು ನೋಡುವಷ್ಟರಲ್ಲಿ ಬಿಲ್ಲೂರ್ ಭಾವಿಗಾಗಿ ಕೂಸೇ ಹೋಯಿತೆಂದು ಮೋಸಮಾಡಿದನೇ ॥೨॥ ಕಂಠಿಹಾರವ ತೆಗೆದು। ಒಂಟೆಬಾವುಲಿಯ ತೆಗೆದು । ಶಿವದಾರ ಕರಡಿಗೆ ತೆಗೆದು ಚಿನ್ನದುಡಿದಾರ ತೆಗೆದು।ಮಧುರೆ ರುಮಾಲ್ ತೆಗೆದು ಕುಡ್ತಿನಿ ಇಜಾರವ ತೆಗೆದು।ಇಷ್ಟುವಸ್ತ್ರ

ಒಡವೆಯಲ್ಲಾ ವಸ್ತ್ರದಲ್ಲಿ ಗಂಟುಕಟ್ಟಿ। ಟೊಂಕದ ನಡುಕಟ್ಟು ಬಿಚ್ಚಿ ಆಮಗ
ಕೈಕಾಲ್ಕಟ್ಟುವಾಗ । ಮಗನು ಗುರುಶಾಂತಪ್ಪ ಬೆದರಿ ಬೆದರಿ ಕಣ್ಣು ಬಿ
ಮಾವೈಯ್ಯಾ ನನ್ನೀ ಭಾವಿಯೊಳಗೆ ಹಾಕಲಿಬೇಡ ॥ ಕಂಠೀಹಾರವ ತಕೊ
ಹಿಂಟೀಬಾವುಲಿ ತಕ್ಕೊ। ಶಿವದಾರ ಕರಡಿಗೆ ತಕ್ಕೊ ಚಿನ್ನದುಡುದಾರತಕೊ



ಮಧುರೇ ರುಮಾಲ್ ತಕ್ಕೊ ಕುತ್ತಿನಿ ಇಜಾರ ತಕ್ಕೊ ಮಾವಯ್ಯ ನನ್ನಿ
ಭಾವಿಯೊಳಗೆ ಹಾಕಲಿಬೇಡ ॥೪॥ ನಿಮ್ಮ ಹೊಟ್ಟೆಯೊಳಗೆ ಮೂರು ಮಂ

ಒಕ್ಕಳೊಳಗೆ ನಾನೊಬ್ಬ ಮಗನೆಂದು ತಬ್ಬಿಕೊಂಡಾನು ಬಿಡದೆ।ಗನ್ನಘಾತ
ಮಾಡಿ ಭಾವಿಯೊಳಗೆ ಹಾಕಿದಾ ತುಂಬಿದ ॥ ಯಾರಾದ್ಬಂದಾರೆಂದು ಸತ್ಯ
ಶ್ರೀಳು ಗಂಗಾದೇವಿಯು।ಮೂರುಸಾರಿ ಮುಳುಗಿಸಿ ಮೂರುಸಾರಿ ತೇಲಿಸುತ್ತ
ಯಾರಾರೂ ಬರಲಿಲ್ಲವೆಂದು ಪಾತಾಳಕ್ಕೆ ತುಳಿದಾಳು ॥ತುಂಬಿದ॥ ಓದೋಶಾಲೆಗೆ
ಹೋದ ಮಗನು ಬರಲಿಲ್ಲವೆಂದು । ತಂದೆ ಕರಿಬಸಪ್ಪ ತಾಯಿ ಚನ್ನಬಸವ್ವ
ತಂಗಿ ಗುರುಶಾಂತವ್ವ । ಅತ್ತೆ ಕರಿಬಸವ್ವ ಸಕ್ಕರೆ ಕರಡಪ್ಪ ಗಡಿಗೆ ಮುದ್ದಪ್ಪ
ಕೋನಾಳಪ್ಪ ನಿಜಲಿಂಗಪ್ಪ ವೀರಭದ್ರಪ್ಪ ಮುದ್ಮಲ್ಲಪ್ಪ । ಒಂಭತ್ತು ಮಂದಿ
ಸಾಹುಕಾರ್ ಕೂಡಿ ತಮ್ಮನೆಂಬ ಬಂಧು ಬಳಗವೆಲ್ಲ । ಮಗನು ಹೋದ
ಸುದ್ದಿಯಕೇಳಿ ಚಿಂತಾಕ್ರಾಂತರಾಗಿ ಹುಡುಕುತ್ತಾ ಹೋಗುತಾರೆ॥ಕಟುಕರ್
ಪೇಟೆ ದಂಡಿನಪೇಟೆ ಕೊಬ್ಬರಿಪೇಟೆ ಶುಕ್ರವಾರದಪೇಟೆ ಭಾವಿಎಲ್ಲಾವ ತಿರುಗಿ
ಬಹಳ ಬೇಸರಗೊಂಡು ಓದೋ ಶಾಲೆಯಮುಂದೆ ಬರುವ ಹುಡುಗಾರ ಕೇಳು
ತಾರೆ।ಯಾರು ಕಾಣೆವೆಂದು ಹೇಳಿದರಾವಾಗ ॥ತುಂಬಿದ॥ ಕಾರ್ಯದರಂಗನ
ಮಗಳು ಕಸ್ತೂರಿಲಿಂಗಮ್ಮ । ಎಡಕೈಯಲ್ಲಿ ಕೊಡಪಾನವ ಪಿಡಿದುಬಿಲ್ಲೋರ್
ಬಾವಿಗೆ ಹೋಗಿ ನೀರು.ತುಂಬುವಷ್ಟರಲ್ಲಿ ಬಾಲಚಂದ್ರನಾಗ ಸತ್ತು ತೇಲಾ
ಡುತ್ತಿರಲು ಬಹಳ ಜ್ಞಾನಿ ಲಿಂಗಮ್ಮನು ತನ್ನಮನಕೆ ತಾನೇತಿಳಿದು । ತುಂ
ಬಿದಕೊಡ ನೀರ ಹಿಂದಕ್ಕೆ ಬಗ್ಗಿಸಿ ಭಾವಿಯ ಮೇಲಕ್ಕೆಬಂದು ಹಿಂದೇಳು
ದಿವಸದ ಮುಂದೆ ನಮ್ಮ ಪೇಟೆಯೊಳಗೆ ಹುಡುಕುತ್ತಾ ಬಾರಿ ಸಾಹುಕಾರ ।
ಕರಿಬಸಪ್ಪನು ಅವರ ಮಗನೆಂದು ಅವರೊಡನೆ ಹೇಳಿದಾಳು ತುಂಬಿದ
ಬಳ್ಳಾರಿ ॥೭॥ ತಂದೆ ಕರಿಬಸಪ್ಪ ತಾಯಿ ಚನ್ನಬಸವ್ವ ತಂಗಿ ಗುರುಶಾಂತವ್ವ
ಅತ್ತೆ ಕರಿಬಸವ್ವ। ಸಕ್ಕರೆಕರಡಪ್ಪ ಗಡಿಗೆಮುದ್ದಪ್ಪ ಕೊನಾಳಪ್ಪ ನಿಜಲಿಂಗಪ್ಪ
ವೀರಭದ್ರಪ್ಪ ಮುದ್ಮಲ್ಲಪ್ಪ ಒಂಭತ್ತುಮಂದಿ । ಸಾಹುಕಾರರುಕೂಡಿ ತಮ್ಮ
ನೆಂಬ ಬಂಧು ಬಳಗ ಎಲ್ಲರುಕೂಡಿ । ಮಗುಹೋದ ಸುದ್ದಿಯಕೇಳಿ
ಬಿಲ್ಲೋರ್ ಭಾವಿಗೆಹೋಗಿ ಭಾವಿಯ ಬೊಗ್ಗಿನೋಡಲು ಮಗನು ಸತ್ತು
ತೇಲಾಡುತ್ತಿರಲು ಈಜಿಬಿದ್ದು ಮಗನತೆಗೆದು ಮುದ್ದು ಮುಖವ ನೋಡಿ
ಬೋರೆಂದು ಅಳುತಾರೆ ಮೋಹದ ಮಗನಿಗೆ ಕೂಸೇ ಮೋಸಹೋದೆಯಾ
ನಮ್ಮನ್ನಿಬಿಟ್ಟು ಕಂದಮಾಯವಾದೆಯಾ ತುಂಬಿದ ಬಳ್ಳಾರಿ ॥೮॥ ಪೋಲೀಸ್
ಪುಟ್ಟಣ್ಣನಿಗೆ ತಿಳಿಸಿ । ಪೋಲೀಸ್ ಪುಟ್ಟಣ್ಣನುಹೋಗಿ ದಫೇದಾರ್ ಚಲು
ವಣ್ಣನಿಗೆ ತಿಳಿಸಿ।ದಫೇದಾರ್ ಚಲುವಣ್ಣನು ಹೋಗಿ ಕೊತ್ವಾಲ್ ಭೀಮಣ್ಣ

ನಿಗೆ ತಿಳಿಸಿ । ಕೊತ್ವಾಲ್ ಭೀಮಣ್ಣನು ಹೋಗಿ ಗಾರ್ಡನ್ ಸಾಹೇಬ
ತಿಳಿಸಿ। ಬಿಲ್ಲೇಜವಾನರ ಕರೆಸಿ ತೋಟೆ ತಳ್ವಾರ್ನ ಕರಸಿ। ಡ್ರಿಲ್ಲಿನ ಪೋಲಿ
ನವನು ಪಲ್ಟನ್ನ ಸಾಹೇಬರು ಕರ್ನಲ್ ದಂಡಿನ ದೊರೆಗಳು । ಸೋಜಿ
ಸುದ್ದಿಯ ಕೇಳಿ ಜೋಡುಕುದುರೆ ರಥಗಳೇರಿ ಗಾಡಗಾಡ ಬಂದರಾಗ ಹೆ
ಬೇಡ ಸಾಹುಕಾರನೆಂದು ಭುಜದಮೇಲೆ ಕೈಯ್ಯನ್ನಿಟ್ಟು ಹೆದರಬೇಡವೆಂ
ಧೈರ್ಯಕೊಟ್ಟರಾವಾಗ ॥ತುಂಬಿದ॥ ಟುಮ್ಮಿ ಸಿದ್ದನಕರೆಸಿ ಐವತ್ತೆರಡು ಪೆ
ಯೊಳಗೆ ಡಂಗೂರವಹೊಯ್ದು । ಸತ್ಯವ ಬಿಡಬೇಡಿ ಪಾಪಕ್ಕೆ ಹೋಗಬೇ
ನಿಮ್ಮಕಣ್ಣಲ್ಲಿಕಂಡದ್ದು ಸತ್ಯವಾಗಿಹೇಳಿರೆಂದು ಟುಮ್ಮಿಸಿದ್ದನು।ತಾನುಡಂ
ರವುಯ್ದುಬಂದು ಪಲ್ಟನ್ನ ಸಾಹೇಬರಮುಂದೆ ಏನಂತ ಹೇಳುತಾನೆ॥ ಯಾ
ಕಾಣರೆಂದು ಹೇಳಿದರಾವಾಗ ಕಟುಕರ ಪೇಟೆಯಲ್ಲಿ ಖಾಜ ಇಮಾಂಸಾ
ಸತ್ಯವ ಬಿಡುವುದಿಲ್ಲ ಪಾಪಕ್ಕೆ ಹೋಗುವುದಿಲ್ಲ ನನ್ನ ಕಣ್ಣಾರ ಕಂಡದ್ದು ಸ
ವಾಗಿ ಹೇಳ್ತೇನಿ ಕೇಳಿರಿ ॥ ಹಿಂದೇಳು ದಿವಸದಮುಂದೆ ನಮ್ಮ ಪೇಟೆಯೊ
ಹಾಸಿ।ಗದುಗೂರ್ ಚನ್ನಣ್ಣನು । ಶಿಶುಮಗನ ಎಡಕೈಯ್ಯ ಪಿಡಿದು ಕರೆ
ಕೊಂಡು ಹೋದದ್ದು ಕಣ್ಣಾರ ಕಂಡೆನೆಂದು ಕೈಫತ್ತು ಕೊಟ್ಟನು ತುಂ
ದ್ಬಳ್ಳಾರಿ ॥೧೦॥ ಗದುಗೂರ್ ಚನ್ನಣ್ಣನಮನೆಗೆ ಹಿಂದೇಳು ಕುದುರೆಪ
ಮುಂದೇಳು ಕುದುರೆಪಾರ । ಪೋಲೀಸುಪಾರ ಮುಲ್ಕಿಜವಾನರ ಪಾ
ಸೋಜಿಗಾರರಗುಟ್ಟು ವೈಶ್ಯಾಂಗಸಾಗುಟ್ಟು ಅರಪಾರ ಜೊತೆಯುಲಿಟ್ಟು ಪ
ಮುಂದಿ ವರ್ತಕರನ್ನಿಟ್ಟು ಗದುಗೂರ್ ಚನ್ನಣ್ಣನಕರೆಸಿ ಕೈಫತ್ತು ತೆಗೆದು ಅ
ಮನೆ ಜಪ್ತಿಮಾಡಲಾಗಿ । ಪುತ್ರನ ಶಿವದಾರ ಕರಡಿಗೆ ಸಿಕ್ಕಿತು ಕುಡ್ತ
ಇಜಾರ ಸಿಕ್ಕಿತು ಸರ್ಕಾರದವರಕೈಗೆ ತುಂಬಿದ್ಬಳ್ಳಾರಿಯೊಳಗೆ ॥೧೧॥ ಗ
ಗೂರ್ ಚನ್ನಣ್ಣನ ಕರೆಸಿ ಎಕ್ಕಡದಲ್ಲೊಡಿಸಿ। ಕೈಕಾಲ್ಗಳನ್ನು ಕಟ್ಟಿಲಕ್ಕೊ
ಬಾಯೊಳಿಟ್ಟು ವಧೆಯ ಬಂಡಿಯನ್ನು ತರಿಸಿ ಬಂಡಿಯ ಮೇಲೆ ಅವನ
ಕುಂಡ್ರಿಸಿ ತೊಗಲಹಾರ ಮಾಂಸದ ಮೇಲೆ ಹೇಲು ಹೆಂಡವ ತರಿಸಿ ಅ
ಮುಖಕ್ಕೆ ತಗಲಿ ಭಲ್ಯದವರು ಭರ್ಜಿಯವರು ಕೂಗುತ್ತ ಬಾಗುತ್ತ । ಬಂ
ಝುಣಝುಣನೆ ನಗಾರೆ।ಢಣಢಣನೆ ಮೂವತ್ತೆರಡು ವಾದ್ಯದಿಂದ।ಐವತ್ತೆ ರ
ಕೇರಿಯೊಳಗೆ ನೋಡುವಂಥ ಜನರಿಗೆ ಛಾಯವನ್ನು ತೋರಿಸಬೇಕು ಎಂ
ಇಂಗ್ಲೆಂಡು ಧೊರೆಗಳುಕೂಡಿ ಭದ್ರಸಂಗನ ಕಟ್ಟೆಯ ಮೇಲೆ।ಶೂಲದ ಮ
ನಿಲಿಸಿ ತಲೆಕೆಳಗೆಮಾಡಿ ಕಾಲುಮೇಲಕ್ಕೆಮಾಡಿ ಎದೆಗೆ ಶೂಲವ ಕೊಟ್ಟ
ತುಂಬಿದ್ಬಳ್ಳಾರಿಯೊಳಗೆ ॥೧೨॥ ತಂದೆ ಕರಿಬಸಪ್ಪನಕರೆಸಿ ಚಿಂತೆಮಾಡಬೇ

ವೆಂದು ನಿನ್ನಪುಣ್ಯ ಚೆನ್ನಾಗಿದ್ದರೆ ಇನ್ನೊಂದು ವರ್ಷದೊಳ್ಗೆ ಪುಣ್ಯಾದ ಮಗನು ಹುಟ್ಟುತ್ತಾನೆ । ತಂದೆ ಕರಿಬಸಪ್ಪ ಇದ್ದೊಬ್ಬ ಮಗನಿಗೆ ಹದ್ದಾ ಕೊಂಡು । ಹೋಯಿತೆಂದು ಬೆಳ್ಳಿ ಬಂಗಾರ ಸುಡಲಿ ವಡವೆವಸ್ತ್ರವು ಸುಡಲಿ। ಲೆಖ್ಖವಿಲ್ಲದೆ ಐವತ್ತಾರು ಸಾವಿರ ರೂಪಾಯಿ ಕೈಲಿಯು ಪಿಡಿದು । ಮೂರು ಬಂಡಾರದವರನ್ನು ಅಂಗಡಿ ಸೆಟ್ಟಿಯಕರೆಸಿ । ಅಕ್ಕಿ ತುಪ್ಪ ಬೇಳೆ ಗೋಧಿ ರವೆ ಬಾಡಾವಿ ಬೆಲ್ಲ ಮೊದಲ್ಗೊಂಡು । ಓಂಕಾರ ಶಿವಶಂಭೋ ಮಹಾದೇವ ಎಂದು ಪಾಪಿ ಪರದೇಶಿಗಳಿಗೆ ಸಾಕು ಸಾಕೆನ್ನುವಷ್ಟು ಸಂತರ್ಪಣೆ ಮಾಡಿ ಸಿದಾ । ಧನ್ಯಧನ್ಯಾತ್ಮನು ಲಾವಣಿ ಮಾಡಿದ ವೀರಣ್ಣನಿಗೆ ಒಂಭೈನೂರು ರೂಪಾಯಿ ಅಪರಂಜಿ ಕೆರಡಿಗೆ ಕೊಟ್ಟರು ॥ ತುಂಬಿದ್ಬಳ್ಳಾರಿಯೊಳಗೆ ಕಂದ ಮಾಯವಾಯಿತೆಂದು ಕೂಸೆ ಹೋಯಿತೆಂದು ಮೋಸಮಾಡಿದನೇ ॥

## ಮೋಹನ್‌ಸಿಂಗ್ ತತ್ವ ಲಾವಣಿ.

ಕಲಿಯುಗದೊಳಗೆ ಕರ್ಮಹೆಚ್ಚಿತು ನಂಬಬೇಡ ಸಾರಿಯರಾ । ಒಲಿದ ಗಂಡನಿಗೆ ಮೋಸಮಾಡುತಾಳೆ ಹುಟ್ಟಿದಂಥ ನಾರಿಯರಾ ॥ ಅರೇ ಬುದ್ಧಿ ವಂತನು ಇದ್ದಸಿಪಾಯಿ ಮುತ್ತಿನಂತ ಚಾತುರಾ । ಅರೇ ನಿಂತುನೋಡಲು ಆತನಭಾವ ಕಾಮನಂತಆಕಾರ ॥೧॥ ಅರೆ ಇದ್ದನೋಡಿ ಈ ಊರೊಳಗೆ ಒಬ್ಬ ಶೆಟ್ಟಿಸಾಹುಕಾರ । ಅರೆ ಮಂದಗಮನೆ ಆತನಮಗಳು ರಂಭೆಯಂತೆ ಪ್ಯಯ್ಯಾರ ॥೨॥ ದೇಶದೇಶದೊಳು ಸಿಕ್ಕದೆಹೋಯಿತು ಅವಳಿಗೆ ತಕ್ಕವರಾ। ಅರೆ ಬಂದ ಬೀದಿಯೊಳೊಂದಿನ ಸಿಪಾಯಿ ಪ್ಯಾಟೆಮೇಲೆ ಸಂಚಾರ ॥೩॥ ಅರೆ ನಿಂತುನೋಡಲು ಆತನಭಾವ ಇಂದುವಿನ ಪ್ರಭಾಕರ । ಸಂದೇಹ ಪರಿತ್ಯಾಗವಾಯಿತೆಂದು ಬಂದಳು ತಂದೆಹುಜೂರ ॥೪॥ ಅರೆ ನಿಂತುಕೊಂಡು ಕೇಳ್ತಾಳೆ ತನ್ನ ತಂದೆಯೂಾಯದುರಿಗೆ।ನೀ ಮಾಡಿಕೊಡೂ ಇವನೀಗೆ ಒಂದು ಸಂದೇಹಬೇಡ ನಿನ್ನ ಮನದಾಗೆ ॥೫॥ ಇಂದು ದಾರೆಯೆರಿ ಇಬ್ಬರೀಗೆ ಏನು ಧನ್ಯಳಾಗಿದ್ದೇನೋ । ಎನ್ನ ಪುಣ್ಯದಾಗೆ ತಾನಾಗಿ ಬಂದನಿಲ್ಲೀಗೆ ॥೬॥ ಮಗಳ ಮಾತುಕೇಳಿ ಸಾಹುಕಾರ ಪಟ್ಟಸಂತೋಷ । ಅರೆ ಕರೆಸಿ ಸಿಪಾಯಿ ಲಗ್ನ ಮಾಡಿಸಿದನಾವ್ಯಾಳವರಾ ॥೭॥ ಅತಿ ಪ್ರೀತಿಯಿಂದಲೇ ಕೊಡುತಿರೆ ರತಿಕಾಮ ನಂಗೆ । ಆತನಕಾಂತೆಗೆ ಗರ್ಭನಿಂತಿತು ಆರು ತಿಂಗಳಮ್ಯಾಗೆ । ನವಮಾಸ ಒಂಭತ್ತು ತಿಂಗಳು ತುಂಬಿಸಿಕೊಂಡು ಪಡದಳು ಬಾಲನಿಗೆ । ಬಾಲಗೆವಳ್ಳಿ

ಎಳೆಸುಳಿಯಂತ ಚಂದುಳ್ಳ ಗಿಣಿರಾಮಗೆ । ವಳ್ಳೆ ಚಂದ್ರನಂತ ಆ ಕಾ
ಥಳಥಳಿಪ ಕಾಂತಿಯಲಿ ಚೆಲುವ ಶೂರ ವಿಕ್ರಮಾ । ನನ್ನ ಪಂಚಪಾಂಡವ
ಭೀಮ । ಸುಂದರ ಬಾಲನೋಡಿ । ಸಿಪಾಯಿ ಡಂಗಾದನು ಧೀರಾ ಮೋಹ
ಸಿಂಗು ಎಂದು ಹಿಡಿಕರಾ । ವರುಷ ಮೂರು ತುಂಬುವತನಕ ಇದ್ದನು ಖು
ಯಾಗೆ । ಅರೆ ತುರುತು ತುರುತು ನೀನು ಹೊರಟುಬರಬೇಕು ಬಿಜಾಪುರ
ಕಾಡೀಗೆ । ಬರಾಬರಿ ಪೈದಟ್ಟ ಅರಿದೇಶದ ವೈರಿಮ್ಯಾಗೆ।ಬರೆದಕಾಗದ ನೋ
ಸಿಪಾಯಿ ಮಿಾಸೆ ಹುರಿಮಾಡಿಸಿದ । ಬೇಗಕರೆದು ಹೇಳುತಾನೆ ಭಾವಕಿರ
ಜತನ ಮನೆಯೊಳಗೆ ಮನೆಯಾಗೆ ॥ ನಮ್ಮ ಧಣಿಯಿಂದ ಕಾಗದಬಂದಿ
ಎನ್‌ಗೆ ನಾನ್ ಹೋಗಬೇಕು ಜಲ್ದಾಗೆ ಜೋಪಾನದಿಂದ ನೀ ಸಾಕಿಕೊ
ಬಾಲನ್‌ಗೆ । ಬಿಡಬ್ಯಾಡಕಂಡ್ಯಾ ವಂಟಿಯಾಗಿ ಊರೊಳಗೆ।ಆಡೊಕೋಗಿ
ಬಾಲನ ಕರೆಸಿ ಹಿಡಿದುಕೊಂಡನು ಕರವಾ ಅರೆ ಮಗನೆ ನೀನಾಡಲಿಕೆಹೋ
ಬೇಡದೂರ ಮಗನ ನೀ ಪಾಲಿಸಿಕೊಳ್ಳೀ ಮಾಡಬೇಡ ಘೋರಾ । ಇ
ಬುದ್ಧಿಹೇಳಿ ಸತಿಗೆ ಹೊರಟನು ಚಾತುರಾ । ಗಂಡಹೋದ ಎಂಟುದಿ
ಇದ್ದಳು ಚಿಂತ್ಯಾಗೆ।ಒಂದುದಿವಸ ಹೊರಟಳು ನೀರೀಗೆ।ಪುಂಡುಗಾರಗೆಣೆ
ಕುಂತಿದ್ದ ಭಾವಿಕಲ್‌ಮ್ಯಾಗೆ । ಬಿದ್ದಿತುನಿಗಾ ಇಬ್ಬರೀಗೆ । ನನ್ನ ಗಂ
ನಾದರೆ ಹೊರಟುಹೋದ ದಂಡೀಗೆ। ಆರುತಿಂಗಳು ಕಳಿಯೊದಿನ್ಯಾಂಗೆ ।
ದಂಡಿಗೋದೋರು ಹೇಳಲಿಕ್ಕಾಗದು ಬದುಕುವಹಿತಭಾರ । ಕುಂತಿದ್ದ ಗೆ
ಯಗೆ ಕರೆಯುತಾಳೆ । ನೀಬಾರೊ ಚಾತೂರ ಗೆಣತಿ ಗೆಣೆಯ ಇಬ್ಬರುಕೂ
ಬಂದರು ಜೊತೆಯಾಗೆ।ಟಾಕು ಟೀಕೆನಿಂದ ಮಡಿಯನುಟ್ಟುಕೊಂಡು ಮಾ
ತಾಳೆ ಅಡಿಗೆ । ಒಳ್ಳೆ ಗೋಧಿಯಾಬೀಸಿ ಹೋಳಿಗೆಮಾಡಿ ತುಪ್ಪಹಚ್ಚಿ
ಒಳ್ಳೆಸಣ್ಣಕ್ಕಿಬೀಸಿ ಶ್ಯಾವಿಗೆಮಾಡಿ ಇಡುತಾಳೆ । ಊಟಮಾಡುತಲೆ ಹೋ
ಕುಂತರು ಮಲಗೋ ಮಂಚದಮೇಲೆ । ಒಳ್ಳೇ ಗಂಧದಬಿಲ್ಲೆ ಅತ್ತರು ಪುನ
ಹಚ್ಚುತಾಳೆ ಮೈಮ್ಯಾಗೆ । ಎಲೆಅಡಿಕೆ ಲವಂಗ ಜಾಕಾಯಿ ಪತ್ರೆ ಸ
ಬಹುರಂಗೆ । ತೊಡೆಯಮೇಲೆ ಕುಳಿತುಕೊಂಡು ವೀಳ್ಯವ ಕೊಡುತಾ
ಗೆಣೆಯನ ಬಾಯಿಾಗೆ ಖುಷಿಯಾಗೆ ॥ ಅಂಥ ವೇಳೆಯಲ್ಲಿ ಆಡಾಕೋಗಿ
ಬಾಲಬಂದ ಮನೆಗೆ । ನಿಂತುಕೊಂಡು ಕೇಳ್ತಾನೆ ತನ್ನ ತಾಯಿ ಎದುರಿ
ಇವನ್ಯಾರೆ ನಿನ್ನ ಜೊತೆಯಾಗೆ ಅರೆ ಅಪ್ಪನಾದರೆ ಹೊರಟುಹೋದ ಪ

ದಂಡೀಗೆ ಇವನ್ಯಾರೆ ಮಂಚದಮೇಗೆ । ಇಂಥಸುದ್ದಿ ಕೇಳಿದರೆ ಕಡಿದಾನಲ್ಲೆ ಎರಡುತುಂಡೀಗೆ । ನ್ಯಾಯವಲ್ಲೆ ನಿಮಗೆ ಅಮ್ಮಯ್ಯ ನಿವ್ಯಾಗೆ । ಮಗನ ಮಾತು ಕೇಳಿ ರಂಡೆ ಹಿಡಿದುಕೊಂಡಳು ಕರವಾಗೆಳೆಯುಗೆ ಹೇಳ್ತಾಳೆಕುಯ್ಯೊ



ಇವನ ಕುತ್ತಿಗೇ । ಅವ್ವ ಎನ್ನ ಕೊಲ್ಲಲಿಬೇಡ ನಾನೇಳುವುದಿಲ್ಲ ಹೊರಗೇ । ಹಾರಂಡೆ ಕೊಯ್ದಳು ಕೇಳದೆ ಕುತ್ತೀಗೇ । ಆದೇ ರಾತ್ರಿಗೆ ಸ್ವಪ್ನಬಿದ್ದಿತು ಈ ಮಗುವಿನ ತಂದೇಗೆ । ತಂದೇಗೆ ಅರೆ ಇಂಥ ಸ್ವಪ್ನಕಂಡು ಸಿಪಾಯಿ ಎದ್ದು ಘಾಬರಿಯಾಗಿ ಓಡಿಹೋಗಿ ಕೇಳ್ತಾನೆ। ತನ್ನ ಧಣೀಯೆದುರೀಗೆ ನನ್ನ ಮಗನ ಮದುವೆ ಊರ್ಯಾಗೆ । ಕೊಡು ಅಪ್ಪಣೀಯ ಜಲ್ದಾಗೆ ನಾ ಹೋಗ ಬೇಕು ಅಲ್ಲೀಗೆ । ಧಣಿಸಕ್ಕು ಅಲ್ಲಿಖುಷಿಯಾಗೆ । ಹೆಂಡತಿಕಡೆ ಮನಸಾ ಯ್ತೆಂದು ಈತಾಗೆ । ಸಾನೂರುವರಹಾ ಕೈಯ್ಯಾಗ।ಕುದುರೆಯೇರಿ ಸಿಪಾಯಿ ಹಿಡಿದು ಬಜಾರ । ಮಗನಿಗೆ ಬೇಕಾದ ವಡವೆಗೋಸ್ಕರ ಹೊಕ್ಕನಂಗಡೀಗೆ

ಅರೆ ಚಂಡು ಬುಗುರಿ ಮಾಗಾಯಿ ಸರಪಣಿ ಜರತಾರಿ ಮುಂತಾದ್ದು।ತಕ
ಡನು ಧೀರಾ ಕೈಯ್ಯಿಗೆ ಒಳ್ಳೆ ಸರಪಣಿ ವಜ್ರದುಂಗಾರಾ । ಕುಡತಿನಿಷ
ರೇಷ್ಮೆವಸ್ತ್ರ ಅಂಚಿನದೋತ್ರ ಅರೇ ಮುತ್ತಿನಪದಕ । ಮೋಹನ
ತಕ್ಕೊಂಡುಧೀರಾ ಹಸ್ತು ಕಡಕು ತಾಮಾಡಿಸಿಕೊಂಡು ಹೊರಟನುಚಾ
ಟಾಕುಟೇಕಿನಿಂದ ಸರದಾರಜಲ್ದಿ ಹೊರಟನು ಊರೀಗೆ ರಂಡೆಕಂಡಳು
ನಿದರ್‍ಯ್ಯಾಗೆ । ದುಡುಕುಮಾಡಿ ಹೋದಳಣ್ಣ ಅಂಗಡೀಗೆ । ತಂದಾಳು
ದುಡ್ಡೀಗೆ ವಿಷವಿಕ್ಕಿ ಕೊಲ್ಲಬೇಕು ಎನ್ನಗಂಡನಿಗೆ । ಅರೆ ನಿಂತುಕೊ
ಕೇಳ್ತಾನೆ ಹೆಂಡತೀಗೆ । ಅರೆ ಮೋಹನಸಿಂಗು ಎಂಬುವ ಮಗನು ಎಲ್ಲೆ
ತಾರೆ । ತೂರ್‍ಯಬೇಡ ಆಡಲಿಕೆಹೋಗಿದಾನೆ ಹಿಡಿಕೊಂಚಧೈರಾ ।
ಪಟನೆದ್ದು ಆಗ ಮಾಡುತಾಳೆ ಅಡಿಗೆಯಾ । ಸುಸ್ತಿನಿಂದ ಬಂದ ಸಿಪ
ಮಲಗಿ ನಿದ್ರ್ಯಾಗೆ । ಅರೆ ಮೋಹನಸಿಂಗು ಎಂಬುವ ಮಗನು ಬಂದು
ದಾಗೆ । ಅರೇ ಅಪ್ಪಕೇಳೋ ಮಿಂಡನಮೆಚ್ಚಿ ಕೊಂದಾಳಲ್ಲೋ ಯನ್ನಿ
ರಂಡೆಮಿಂಡ ಇಬ್ಬರುಕೂಡಿ ಹೂತರುಹಿತ್ತಲೊಳಗೆ । ನೀನುಣ್ಣಬೇಡ
ವ್ಯರ್ಥವಾಗಿಸಾಯ್ತಿ । ಪಾಪಿಕ್ಕೈಯ್ಯಾಗೆ । ಅರೆ ಇಂಥ ಸ್ವಪ್ನಕಂಡು ಸಿಪ
ಎದ್ದು ಘಾಬರಿಯಾಗಿ ಓಡಿಹೋಗಿ ನೋಡುತಾನೆ ಮಣ್ಣುಬಗೆದು
ಲಾಗೆ । ಎಲ್ಲಿಗೋದನೋ ಚಂದದರಗಿಣಿರಾಮ । ಶರತ್ಕಾಲದಂದೆ ಇರು
ರಾಮ । ಥಳಥಳಿಪ ಕಾಂತಿಯಲ್ಲಿ ಚೆಲುವ ಬಾಹುವಿಕ್ರಮಾ । ಎನ್ನ
ಮಾತಾಡೋಪ್ರೇಮಾ । ಏನುಸಾವುಕೊಟ್ಟನೋ ಶ್ರೀರಾಮ । ಶ್ರೀ
ಕಡಿದುಕೈಯ್ಯ ಕುಡಿದುರಕ್ತ ಹೊರಟನುಚಾತುರಾ । ಭಗವಂತನ ಧ್ಯಾನ
ಮಾಡಿ ಕುಳಿತವನೇ ಧೀರಾ।ಇನ್ನೊಂದು ಜನ್ಮಕಾದರು ಕೊಡುವೆಯ
ಅರೆ ಕತ್ತಿಯಕೊಂಡು ತನ್ನಶಿರವ ಛೇದಿಸಲಿಹೋದ । ನಂದಿಯ
ಬಂಧು ಸ್ವಾಮಿತಾ ಜಗಧೀಶ್ವರ।ಅರೆ ಭಲೆಬಾಪುರಿ ಮೆಚ್ಚಿದೆಕೇಳ್ ಕೊ
ವರವಾ । ಸತ್ತಬಾಲನು ಎದುರಿಗೆ ಬಂದನು । ಕಾಶಿವಿಶ್ವೇಶ್ವರಾ ವ
ಬಾಲನ ಮರಳಿಕೊಟ್ಟನು । ಶೇಷಶಯನನ ಮಿತ್ರನದಯದಿಂದ
ಮಕ್ಕಳು । ಬಂದರು ಜೊತೆಯಾಗೆ ಜೊತೆಮುತ್ತು ಎರಡು ಕೂಡಿದ್ದಾ
ನನ್ನ ತಬ್ಬಲಿಮಾಡಿ ಹೋಗಿದ್ಯಾಮಣ್ಣಿಗೆ ಮಗನೆತ್ತಿತಬ್ಬಿ ಮು
ಶೇಷಾದ್ರಿದಾಸರಾಗಿರ್ದರಾಮೋಲೆ । ಬಂದೀತು ಕಂಪಣಿದೌಲತ್ತು ।
ಹೆಚ್ಚಿ ತುಜ್ಞದರ ಹೆಂಗಸಿನಜಾತೀಗೆ । ಇಡಲಿಕ್ಕಾಗದು ಕೇಳೋಹಿತ

ಷಾಹಿರಿನೊಳಗೆ ನಮ್ಮಮೈಸೂರು ದೊಡ್ಡ ಷಹರಾ।ಎಂಟುದಿನಕ್ಕೆ ಮೆರೆಯು ತಾರೆ ಸಂತೆ ಭಾನುವಾರ । ನಿಮ್ಮ ಗುರು ಕಲ್ಲಿವರದರಾ । ನಿಮ್ಮ ಡಬ್ಬಿನ ಮೇಲೆ ನಮ್ಮ ನಿಶಾನೆ ತುರಾಯಿ ಹಚ್ಚಿದಹಾಂಗೆ।ಕಲಿಯುಗದೊಳಗೆ ಕರ್ಮ ಹೆಚ್ಚಿತು ನಂಬಬ್ಯಾಡ ನಾರಿಯರಾ ॥

## ಉಡುಪಿ ಕೃಷ್ಣನ ಭಜನೆ.

ಉಡುಪಿಕೃಷ್ಣಾ । ಪೊಡವಿಗೊಡೆಯಾ । ಬಿಡದೆ ನಿನ್ನ । ಅಡಿಗೆರಗುವೆ॥ ಕಡಲಶಯನಾ । ಬಡವರನ್ನು । ಬಿಡದೆಪೊರೆಯೋ । ವೃಡನ ಸಖಗೆ ॥ಅಪ॥ ನಾರಿಜನರ ಶೀರೆಸೆಳೆದು ಚೋರತನದಿ ಮರವನೇರಿ । ಕ್ಷೀರವನ್ನೇ ಸೂರೆಗೊಂಡು । ಮಾರಜನಕ ವಾರಿಜಾಕ್ಷ ॥೧॥ ಅಷ್ಟಮಠದ ಯತಿಗಳಿಂದ । ಇಷ್ಟಪೂಜೆಗೊಳ್ವರಾಯ । ಇಷ್ಟಾರ್ಥವ ಪಾಲಿಸೆನ್ನ । ಎಷ್ಟು ಪೊಗಳಾಲಿ ನಿನ್ನ ಮಹಿಮೆ ॥೨॥ ಸಸಸ ಸರಿಗಮಪಾಪಮ ಪಧನಿಸ । ಸನಿ ಪಧಮಪಗಾ ಮಪ ಗರಿಸಾ । ಪಪಪ ನಿನಿನಿಪದಿ ಪನಿಪಾಸ ನಿನಿನಿಸನಿ ಸಂನಿಸಧನಿಧೆಪಾ ॥೩॥

## ರಾಜಯೋಗದ ತತ್ವ.

ರಾಜಯೋಗದ ಮಾತಿನ ಅರ್ಥ ತಿಳಿಯಬೇಕು।ನರಜನ್ಮದಲ್ಲಿಹುಟ್ಟಿದ ಮೇಲೆ । ಮೋಕ್ಷಮಾರ್ಗದಲ್ಲಿರಬೇಕು । ತಾಯಿತಂದೆ ಹೊಟ್ಟೆಯಲ್ಲಿ ಹುಟ್ಟಿ ಅವರ ಪಾದಪೂಜೆ ಮಾಡಲಿಬೇಕು ಗುರುಹಿರಿಯರನ್ನ ಕಂಡರೆ।ಭಕ್ತಿಮಾರ್ಗದೊಳಿರಬೇಕು ॥ ಪ್ರಪಂಚದೊಳಗೆ ಹುಟ್ಟಿದಮೇಲೆ । ವಿದ್ಯಾಬುದ್ಧಿ ಕಲಿಯಬೇಕ ॥ ಸಜ್ಜನರಲ್ಲಿ ಸಂಗಮಾಡಿ ಅವರಂತೆ ನಡೆಯಲಿಬೇಕು । ದುರ್ಜನರಾ ಕಂಡರೆ ದೂರವಿರಬೇಕು ॥ ಅಂತರಂಗದಲಿ ಶಿವಧ್ಯಾನ ಪೂಜೆಗಳಿರಬೇಕು । ಕಲಿಯುಗದೊಳಗೆ ಹುಟ್ಟಿದಮೇಲೆ ಮದುವೆ ಮುಂಜಿಯಾಗಲಿಬೇಕು।ಅಣ್ಣ ತಮ್ಮ ಬಂಧುಬಳಗವಿದ್ದಮೇಲೆ । ಬಹಳ ಪ್ರೀತಿಯಿರಲಿಬೇಕು।ಬಹಿರಂಗದಲಿ ಸರ್ವರಕೂಡೆ ಎಲ್ಲರ ಕಟ್ಟಿಕೊಳ್ಳಬೇಕು॥ಬಯಸಿಕೊಂಡು ತಾ ಬಂದದ್ದೆಲ್ಲಾ ಪ್ರೀತಿಲಿ ಊಟಮಾಡಲಿಕ್ಕಬೇಕು । ನಾಲ್ವರಲ್ಲಿ ಹೋಗಿ ಕುಂತರೆ ಅವರಂತೆ ನಲಿಯಲಿಬೇಕು । ಇರೋ ಸಾಧನೆ ಮಾಡುತ್ತ ಗುರುವನ್ನು ಹಡುಕಲಿಬೇಕು॥ ಮಗ್ಗಿರಿ ಷಾಹಿರ ಬಸವಣ್ಣದೇವರ ಹೋಗಿ ಕಣ್ಣಲಿನೋಡಬೇಕು । ಡಬ್ಬಿನ ಮೇಲೆ ಮುತ್ತಿನ ತುರಾಯಿ ಸದಾಕಾಲದಲ್ಲಿರಬೇಕು ॥ ವೆಂಕೋಜಿ ಹೇಳಿದ ಮಾತನು ಕಿವಿಗೊಟ್ಟು ಕೇಳಲಿಬೇ । ರಾಜಯೋಗದ ಮಾತಿನರ್ಥವ ॥

## ಚಿದಾನಂದರ ತತ್ವ.

ಚಿದಾನಂದನೊಳು ಸದಾಬೆರೆಯುವ ವಿಧಾತಿಳಿಯಬೇಕು|ವೇದವ
ಅಂಶ್ಯವಿದು ಸಾಧಿಸಿಕೊಳಬೇಕು ॥ ಆಸೆಪಾಶದ ಹೇಸಿಕೆಯೊಳು ಸಿ
ಮೋಸಹೋಗಲಿಬೇಡ ವ್ಯಸನಾಗಿಸನಾವೇಬೋಗಿಸಿ ಬಿಸಿಮಾಡದೆಪಶುಕ
ಮೂಢಾ ॥ ಗುರುವಿನ ಮರೆಯಾಗಿರಿ ಮುರಿಮಾಡಿ ತಿರುಗುವನೇ ಮೂ
ಅರುವಿನೊಳಗೆ ಪರಮಾತ್ಮನೆಲ್ಲೊ ಅರಿತಬಿಳ್ಳೊಗಾಚೆ । ತೊಂದುಮಾ
ಖಂಡಿರುವರು ತಂದೆತಾಯ್ಗಳಿರಿವರೂ ॥ ಹೊಂದಿದ ಮಾತ್ರವೆ ಬಂಧು
ಗವೂ ಹಿಂದೆಬರುವುದಿಲ್ಲ ॥ ಅರೆ ॥ ಹೊನ್ನು ಮಣ್ಣು ಮಣ್ಣು ತನ್ನದೆಂ
ಜಿಸ್ನಾಣವಬಿಡು ಮನದೊಳು ಅನ್ನಗರ್ವದಲ್ಲಿ ಹೆಚ್ಚಿದ ಮದವನು ಅ
ತಿಳೀಮನದಿ। ಪಾರಮಾರ್ಥದೊಳು ಪರಮಾತ್ಮನಲ್ಲೈಯ್ಯಾ। ತೋರು
ವಂತೆ। ಧರೆಯೊಳು ಕಾಯಾಪುರದೊಳಗಿರುವಾಗ ರಂಗಧಾಮನಂತೆ।
ಗುರು ರಾಮಲಿಂಗೇಶನ ಚರಣಸೇರಿರಬೇಕಂತೆ ॥ ಅರೆ ॥ ಚಿದಾನಂದನ
ಸದಾಬೆರೆಯುವ ವಿಧಾ ತಿಳಿಯಬೇ ॥

## ಚಿತ್ರಕಲ್ಲುದುರ್ಗದ ಲಾವಣಿ.

ಹರಹರ ಸಾಂಬಸದಾಶಿವ। ಶಂಭೋಶಂಕರ ಸಾಂಬಶಿವ । ಶಿವ
ಸದಾಭಜಿಸುವ। ತನ್ನ ನಂಬಿದ ಭಕ್ತರಕಾಯ್ವಾ ॥ ಅರೆ ಕೈಲಾಸದೊ
ಸಭೆಕೂಡಿತು। ಇಂದ್ರನಗ್ನಿ ನೈರುತ್ಯಾವರುಣ ವಾಯುವು ಕುಬೇರಈಶ
ಅಷ್ಟದಿಕ್ಪಾಲಕರ ಕೂಡಿಸುತಾ । ವಿಷ್ಣುಬಂದನು ಬ್ರಹ್ಮಬಂದನು ಗಣ
ಬಂದನು। ಕುಣಿಯುತ ಜಯಸುತ। ಕೋಟಿಸುರರು ಕಡಿದರಲ್ಲಿ ॥
ಶಕ್ತಿತಾ ಪಾರ್ವತಾ ನಾರದಮುನಿಗಳು ಬಂದರಲ್ಲಿಗೆ । ವೀರಭದ್ರ ಬಂ
ನಸುನಗುತಾ ॥ ಸಪ್ತಋಷಿಗಳು ಬಂದರು । ಸಭೆಯಲ್ಲಿ ರಂಭೆ ಊ
ಮೇನಕಿಸಹಿತ ॥ ಆದಿಲಕ್ಷ್ಮಿಯು ಬಂದಳು ಸಭೆಯಲಿ । ಭಾರತಿವೀಣೆ
ನುಡಿಸುತ್ತ। ಸರಿಗಮಪಧನಿಸ ಸನಿಧಪಮಗರಿಸ|ಸಪ್ತಸ್ವರಗಳ ಕೂಡಿಸು
ತಗಡಿಥೀಂ ತೊಂತಧಿಕಿಡೆಯೆಂದು ವಿಷ್ಣು ಮೃದಂಗವ ನುಡಿಸುತಾ ॥ ಸ
ಮುಂದೆ ಗೆಜ್ಜೆಯ ಕಟ್ಟಿಕೊಂಡು । ಶಿವ ಕುಣಿಯುತಬಂದಾ ॥ ಪಾ
ತಿಳಿದುಹೇಳು ನಿನ್ನ ಮನಸಿನಲೀ। ಯಾವ ವಾರದಲಿ।ಯಾವ ಮುಹೂ
ದಲಿ । ಶಂಕರ ನಾಟ್ಯವಾಡುತಬಂದ ಸಂತೋಷದಲೀ ॥ ಅರೆ ಸವಾ

ಮಾಡುತೀನಿ ಷಾಹಿರ ನಿನಮೇಗೆ । ಅರೆ ತಿಳಿದು ಹೇಳೋ ನಿನ್ನಮನಸ್ಸಿನಲ್ಲಿ॥ ಏನು ಕಟ್ಟಿಕೊಂಡ ಹೋಗಬೇಕು ತಮ್ಮ ತಿರುಗಬೇಡ । ಅಹಂಕಾರದಲ್ಲಿ ಎಷ್ಟುವಿಧದಲಿ ಭಜಿಸುವ ಭಕ್ತರಿಗೆ ॥ ಬೇಡಿದ ವರಗಳಕೊಡುತಲಿ । ಹರ ಹರಹರ ಸಾಂಬಸದಾಶಿವ ಶಂಭೋಶಂಕರ ಮಹದೇವಾ ॥ ಶಿವಶಿವ ಸದಾ ಭಜಿಸುವೇ । ತನ್ನ ನಂಬಿದ ಭಕ್ತರನುಕಾಯ್ವ ॥ ಐವತ್ತಾರು ದೇಶದಿ ಕರ್ಣಾಟಕ ಚಿತ್ರದುರ್ಗದ ಷಹರಾ । ಅರೆ ನಡು ಊರೊಳಗೆ ಇರುತ್ತೈತಣ್ಣಾ।ದೊಡ್ಡ ಗರಡಿಯ ವಿಸ್ತಾರಾ । ರೋಮಕೆ ಸಹಸ್ರಕೋಟಿ ಲಿಂಗವಧರಿಸಿ ಬಕದಂಡನೆ ಮಹದೇವಾ। ಚಿನ್ನಲಾದ್ರಿಗಿರಿ ಮುರಿಗೇಸ್ವಾಮಿಗೆ ನಾಮಾಡುವೆನಮಸ್ಕಾರ॥ ಕೆಟ್ಟಪದಗಳ ಹೇಳಲಿಬ್ಯಾಡ । ದುಷ್ಟಬುದ್ಧಿ ಬಿಡುಷಾಹಿರ॥ಕೆಟ್ಟಮಾತುಗಳ ನಾಡಲಿಬೇಡ ತಿಳಿಯೋಚಾತುರಾ । ಕಾಮಕ್ರೋಧ ಮದಮತ್ಸರ್ಯವೆಂಕೋಜಿ ದಾಸೋಜಿಯವರಿಗೆ । ಗಣತೇರು ಮಾಡಿದರಾರರೀತಿಯಾ ಹರಹರಹರ ಸಾಂಬಸದಾಶಿವ । ಶಂಭೋ ಶಂಕರ ಸಾಂಬಶಿವ ॥

## ಗೋಷಾಯಿ ಕಲ್ಗಿ ಕಾವಣಿ.

ಅವನಿತೋರಿ ನೀಧಣಿ । ಮುತ್ತಿನಾಮಣಿ ಮಾತನಾಡ್ಗಣಿ॥ಮೇಲಿಣಿ ಜಡೆ। ನಿನ್ನ ಜಡೆಯಮೇಲೆ । ಮೇಲ್ಕುಡಿನಾಗರಾ ॥ ಎಲೆ ಕಾಸಿನಾತೋಡಾ॥ ಮಹಮ್ಮಾರಿ ಬಿಸುಗೆಕೂಡಿ । ಮೇಲಾಗಿ ಬಂದು ಕೀಲ್ಗಾಡಿ ಸಾರೋಟು।ಹೂಡಿ ಕುದುರೆ ಜೀನ್ಮಾಡಿ।ಮೇಣದಾಬತ್ತಿ ಹುರಿಮಾಡಿ ಮೇಣದಬತ್ತಿ ಹುರಿಮಾಡಿ ತಣ್ಣದ ದೀವಿಗೆನೀಡಿ । ತಣ್ಣದೀವಿಗೆ ನೀಡಿ ನೆರೆಯೊಳು ಮಿಠಾಮಿಅಂಗಡಿ । ಅಡಿಯುಸೇರು ತ್ರಾಸಿನೋಳಡಿ ॥ ಮನೆಗೆ ನೀನಡಿ । ಫಲಹಾರವನ್ನುಮಾಡಿ। ಯಾಲಕ್ಕಿ ಸುಂಟಿ ಪುಡಿಮಾಡಿ । ಬೇಕಾದ ಅಡಿಗೆ ನಾವ್‌ಮ್ಯಾಡಿ । ಮೇಲ್ ಷೋಕಿನಿಂದ ಊಟಮಾಡಿ।ನಾವು ಲೇಪುದಿಂಡಿನ ಮೇಲೆಕೂಡಿ ಚಮತ್ಕಾರ ಮಾಡಿ । ಪಗಡೆಸೀಸಾಡಿ ಮುದ್ದಾಡಿ । ಕೆನ್ನೆನೀಕಡಿ ನಿನ್ನಮುದ್ರೆ ಯುಂಗುರಾ ನೀಡಿ ॥ ನಿನ್ನ ಮುದ್ರೆಯುಂಗುರಾ ನೀಡಿ।ನಿನ್ನ ಮೂಗು ಸಂಪಿಗೆ ಕುಡಿ । ನಿನ್ನ ಮೂಗು ಸಂಪಿಗೆಕುಡಿ ॥ ನಾನಡಿಕೆ ಕೊಟ್ಟೆನು ಬಾಯ್ಬಿಡೀ ನಾನಡಿಕೆಕೊಟ್ಟೆನು ಬಾಯ್ಬಿಡೀ ॥ ವೆಂಕೋಜಿ ಇರುವದೊಂದು-ಗಡಿ ಹಣ್ಣು ಕಾಯ್ಪಡಿ ॥ ಕಾಸಿನ ಸಾಂಬ್ರಾಣಿ ಇಡಿ । ಕಾವೇರಿ ಸ್ನಾನ ನೀಂ ಮಾಡಿ । ಕಾವೇರಿಸ್ನಾನ ನೀಂ ಮಾಡಿ ॥ ನಂಜನಗೂಡು ಯಾತ್ರೆ ನೀಂಫಡಿ॥ನಾಗೇಂದ್ರ

ಪುತ್ರನಾ ಪಡಿ । ನಾಗೇಂದ್ರಪುತ್ರನಾಪಡಿ ॥ ಒಬ್ಬ ಗೋಷಾಯಿ ಹೋ
ನೋಡಿ । ಒಬ್ಬ ಗೋಷಾಯಿ ಹೋಗ್ತಾನೆ ನೋಡಿ ॥ ಅವನೊಳಿರು
ಮೂರು ನುಡಿ । ಅವನು ಹೇಳಿಹೋಗ್ತಾನೆ ಮೂರುನುಡಿ । ನಾವು
ಹೋಗೋಣ ನೀನಡಿ ॥

## ತತ್ವ ವೆಂಕೋಜಿ ವಿರಚಿತವಾದದ್ದು.

ನಾಲ್ಕರಸಭೆಯಲ್ಲಿ ಕೈಮುಗಿದು । ಕೇಳುತೀನೊ ನಿನ್ಗೆ ಷಾಹಿರ ಕೇ
ಳೀನೋ ನಿನ್ಗೆ।ಕೀ ಅರ್ಥಮಾಡಿಕೊಡೋ ನಮ್ಗೆ।ಕೀ ಅರ್ಥಮಾಡಿಕೊ
ನಮ್ಗೆ ॥ ಎಲ್ಲಿಂದ ಬಂದೆ ಯಾವಲ್ಲಿ ನೀನಿರುವೆ । ಯಾವ ಮಠಾ ನಿಮ್ಮ
ಷಾಹಿರ ಯಾವದೇಶ ನಿಂದು ॥ ಗೊತ್ತಿನ ಸ್ಥಳಾ ತೋರಿಸಬೇಕು ಈ
ನೊಳಗೊಂದು ಕಂಚಿನಕೋಟೆ ಕಟ್ಟೈತೆ। ಕೀ ಒಂಭತ್ತು ಬಾಗಿಲು ನಿಲಿ
ಕೀ ಒಂಭತ್ತು ಬಾಗಿಲು ನಿಲಿಸೈತೆ ॥ ಕೋಟೆಯೊಳಗೆ ಐದುಕೋಣೆ
ಬೇರೈತೆ । ಹಣೆಯೊಳಗೇನು ಬರದೈತೆ॥ಕೋಟೆಕಟ್ಟದ ಬಡಗಿಯನ್ನು ಕೇ
ಳೀನೋ ನಿನ್ಗೆ ॥ ಕೀ ಅರ್ಥಮಾಡಿಕೊಡೋ ಯನ್ಗೆ । ಐದು ಕೋಣೆಗೆ
ಬಾಗಿಲು ಪಾರಾ ನಿಂತೈತೆ । ಅಲ್ಲಿ ನೀನೋಡು ಜಗುಲಿ ಹಾಕೈತೆ । ಆ ಜ
ಮೇಲೆ ಈಶ್ವರನೆಂಬೋ ಪರಮಾತ್ಮನು ಕುಂತೈತೆ ॥ ಅಲ್ಲಿ ನೋಡು
ನೀರು ಸುಡುತೈತೆ । ಶರೀರದೊಳಗೆ ಯಲ್ಲೈತೆ । ಬೆಂಕಿಯಲ್ಲೈ
ನಾನು ಕೇಳುತೀನಿ ನಿನ್ಗೆ ॥ ಕೀ ಅರ್ಥಮಾಡಿಕೊಡೋ ನನ್ಗೆ । ಶ
ದೊಳಗೆ ಒಂದು ಕುದುರೆ ಬೇರಿಬೇರೈತೆ ॥ ಹೊಟ್ಟೇಲಿ ಜೇನು ಅ
ಬಿಗಿದೈತೆ । ಅದರ ಗೋಣಿಯೊಳು ಕಾಯಿತುಂಬಿದ ಮೇಲೆ॥ಕುದುರೆನೊ
ಹ್ಯಾಂಗೆ ಕುಣಿತೈತೆ । ಶರೀರದೊಳಗೆ ಯಲ್ಲೈತೆ ಕುದುರೆ ಯಲ್ಲೈತೆಕಾ
ಕೇಳುತಿನೋ ನಿನ್ಗೆ ಕೀ ಅರ್ಥಮಾಡಿಕೊಡೋ ಯನಗೆ ॥ ನೀರಿಗಂತ
ಬಂದೆ ನೀರು ತುಂಬೈತೆ । ಅಲ್ಲಿ ನೋಡು ಹಾವು ಕುಂತೈತೆ । ಹಾವಿಗೆನೊ
ಆಕಾಶದೊಳಗಿರುವಾ ಗರುಡ ಇಳಿದೈತೆ । ಇಬ್ಬರಿಗೂ ಜಗಳಾ ಬಿದ್ದ
ನೀರು ವಣಗಿತು ಹಾವು ಸತ್ತಿತು ॥ ಹದ್ದು ಹಾರಿತು ಗಗನಮಂಡಲಕ್ಕೆ
ದೀತು । ಬಾಗಿಲಿಶಾಲಿ ಮನಸ್ತನದವನು ಕಟ್ಟದ ಲಾವಣಿ ॥ ಮೈಸೂ
ಪ್ಯಾಟೆಗೆ ಸರಿಯೇ । ಬಾಯಿನಮೇಲೆ ಗುಂಡಿನಲ್ಲಿ ಹೊಡೆದಾಂಗೆ ॥

## ರಾಮಬ್ರಹ್ಮಾನಂದರ ಯಾಲಪದ ತತ್ವ.

ನಾನು ಅದ್ಭುತದ ಸ್ವಪ್ನವನು ಕಂಡೆ ನೋಡೀ ಸ್ವಾನುಭವಾನಂದ ಸುಖನಿದ್ರೆಮಾಡಿ ‖ ಪ ‖ ತಾನಲ್ಲಧನವಂದೆ ನಿಲದಾಗ ನಾನಾ ಆಶ್ಚರ್ಯ ತೋರಿಕೆ ತೋರಿದಾಗ|ಅಗಣಿತನ ಪ್ರಭೆಯು ತಿರುನಗೆಂಘಾಗೆ ನಡದೂ ಖಗ ನೆನಿಸಿತು ಜಗವು ಮೂರುಗ ಣ ತಲೆದೋರಿತೂ‖೨‖ಮೂರು ವರ್ನದಕೋಳಿ ಕೂಗಿ ಬೆಳಗಾಗಿ ಆ ರವಿಯು ತಾನೆಂದು ಅಂದುರೂಪಾಗಿ ‖೩‖ ತೋರಿ ಅದ್ಭುತವು ವಡೆದು ಬಯಲಾಗಿ ಹರಿದಾವು ಇದು ಪಕ್ಷಿಗಳುಮುಂದೆ ತಾನಾಗಿ‖೪‖ ಮಿಂಚುಪೊಳೆಯು ಸೂಕ್ಷ್ಮರೂಪಾಗಿ ತೋರಿ ಪಂಚವರ್ನದ ಸಲಬೈಲಹಂಸಗಳು ಸೇರಿ ‖ ಒಂದರೊಳಂದು ಅನ್ಯೋನ್ಯವಾಗಿ ಪರಿಣಮಿಸಿಕೊಂಡೊಂದು ಂದು ಬಗೆಯಾಗಿ ‖ ೬ ‖ ತುಂಬಿ ತನ್ಮಯವಾಗಿ ಬ್ರಹ್ಮಾಂಡವೆನಿಸಿ ಶಂಭು ವಿಧಿ ವಿಷ್ಣುವಂದದಿ ಆತ್ಮನಟಿಸಿ ‖ ೭ ‖ ದೇವದಾನವ ಮೃಗ ಪಕ್ಷಿಯೆಂದೂ ಭವಜಡದ ಲತೆವೃಕ್ಷಗಿರಿ ನದಿಗಳೆಂದೂ ‖ ೮ ‖ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂದು ಒಪ್ಪಿದವು ಜಾತಿಗಳು ಹೆಣ್ಣು ಗಂಡೆಂದು ‖ ವೇದಶಾಸ್ತ್ರದ ಭಾಷೆಯು ಗದ್ಯಪದ್ಯಾಮೇದಿನಿಯೆ ಮುಸುಕಿದವು ಚೌಷಷ್ಟಿ ವಿದ್ಯಾವೋದಿ ಸ್ವಲ್ಪವುತಾನೆ ಅತ್ಯಧಿಕವೆಂದು ಹೊಡೆದಾಡಿ ಕಾದುವರು ಕಡಿಮೆಹೆಚ್ಚೆಂದು ‖೧೧‖ ಕರ್ಮಕಾಂಡವನೋಡಿ ನಡೆಸುವರು ಕೆಲವು ಕರ್ಮವೆ ಬ್ರಹ್ಮವೆಂದು ಹೇಳುವರೂ ‖ ೧೨ ‖ ಶಿವನೆದೊರೆಯೆಂದು ಭಜಿಸುವರು ಕೆಲವರು ಶಿವನು ಬಿಡುವಿಷ್ಣುವೇ ಗತಿಯೆನ್ನುತಿಹರು ‖೧೩‖ ಶಕ್ತಿಯೇ ಅಧಿಕವೆಂದು ಕೆಲವರು ಭಕ್ತಿಯಲಿ ವ್ರತನೇಮವನು ಬಿಡದಿಹರು ಕೆಲವರು ‖ ಅಗ್ನಿವಾಯುವೆಕೆಲರು ಬೌದ್ಧಮತ ಕೆಲರು । ವಿಘ್ನೇಶ ಮೈಲಾರ ಭೈರವನ ಕೆಲವರು ‖ ೧೫ ‖ ಮಾರಣ ಮಂತ್ರಕ್ಷುದ್ರಜನ ಕೆಲರು ಘೋರತಪ ಕೆಲರೇ ‖ ಸೂರ್ಯಚಂದ್ರ ಗ್ರಹಗಳನು ಭಜಿಸುವರು ಕೆಲರು । ಮಾರಿದುರ್ಗಾದಿಗಳಾರಾಧಿಪರು ಕೆಲರು ‖ ೧೭ ‖ ಬಿಡು ದೈವ ವಡಿಮಡೆಯನತ್ಯಧಿಕವೆಂದು ಹೊಡೆದಾಡಿ ಕಾದುವರು। ಕಡಮೆ ಹೆಚ್ಚೆಂದು ‖ ೧೮ ‖ ಒಂದು ದೈವವು ಇಲ್ಲ ನಮಗೆಂದು ಕೆಲವರು ತಮ್ಮ ದುಃಖದಿ ನೀ ದೇವರನು ಬೈಯ್ಯುತಿಹರು ಕೆಲರು‖ಸರ್ವವನು ತ್ಯಜಿಸಿ ಆನಂದದೊಳಗಿಹರು ಆದಿಪ್ರಣವನೆ ಸಕಲ ಶಬ್ದವಾಗಿರುತ । ನಾದಗಳು ಬೇರೆ ತನ್ನೊಳಗೆ ಕೇಳ್ವೆನೆನುತ ‖ ೨೦ ‖ ಒಳಗೆ ಷಡುಚಕ್ರವರ್ನದಳವೆಂದು।

ಸುಳಿವ ಹಂಸನ ಗತಿಯು ತಿಳಿಯಬೇಕೆಂದು ||೨೨|| ಒಳಗೆ ಚಿತ್ರಪ್ರಭ
ಥಳಥಳಿಸುತಿರುವ ಬೆಳಕು ಈ ದೇಹ || ಈ ದೇಹದೊಳು ಕಾಣಬೇಕೆ
|| ೨೩ || ಸೂರ್ಯಶಿಖಿ ಸೋಮಮಂಡಲ ಭಾವಿಸುತ ಮಾರುತನ ಬ
ಕುಂಡಲಿಯನೆಬ್ಬಿಸುತಾ || ೨೪ || ಗೋಚರಿಪ ತೇಜವನು ಕಾಣಬೇಕೆ
ಶಾಂಭವಿ ಮುದ್ರಾಸನವೆನುತ || ೨೫ || ದೇಶಕೋಶದ ಒಳಗೆ ಹೊರ
ಅನ್ನ ವಾಸುದೇವನ ಸರ್ವತುಂಬಿದನು ಧನ್ಯ||ರೊಕ್ಕ ಮಕ್ಕಳು ಹೆಚ್ಚಿನ
ವನು ಕೆಲರು ಮಕ್ಕಳಿಲ್ಲದೆ ದಣಿದು ದುಃಖದಲಿ ಕೆಲರು || ೨೬ || ಸತಿ
ಭಾಗ್ಯದ ವಿಷಯದಲಿ ಕೆಲರು | ಸತಿಸುತರು ಮೃತವಾಗೆ ವ್ಯಥೆಪಡುತಲಿ
||೨೮|| ನಗುತ ಯಮಗಾರು ಸರಿಯೆನುತ ಕೆಲರು ಪಗಡೆ ಚತುರಂಗ ಪ
ಮೆರೆಯುತಿಹರೂ ||೨೯|| ಸಾರವನು ಮರೆದು ಸಂಸಾರದೊಳಗಿಹರು|ಮ
ದಿನದ ಬಾಳು ಇದಕೆ ಮಿಡುಕುವರು || ದಿನ ಪಕ್ಷ ಮಾಸ ಋತು ಅ
ವರುಷಾಗಿ ತನುಬಿರದಿಂದ ಬೀಳ್ವುದು ವ್ಯರ್ಥವಾಗಿ ||೩೦|| ಅವನೊ
ಇದನ್ನು ನಟಿಸುತಾಲಿರುವ | ಜೀವಬೊಂಬೆಯುಮಾಡಿ ಕುಣಿಸುತಾಲಿ
ಮಾಡಿ ತಾ ಮಾಯಲೋಕಪರ್ಯ ನೋಡಿ | ಈ ಕನಸು ಇದುಯೆ
ಆಶ್ಚರ್ಯ || ೩೧ || ನಿತ್ಯನಿದ್ರೆಯಲ್ಲಿ ಕಾಣುವ ಸ್ವಪ್ನಗಳಿಗೆ ಅತ್ಯಧಿಕ
ಕನಸು ಮತ್ತೊಂದು ಗಳಿಗೆ||೩೨||ಅದು ಚಿಕ್ಕಕನಸು ಮತ್ತು ಇದುದೊ
ಕನಸು | ಅವು ಇವೆರಡಳಿದರೆ ನಿರ್ಮಲದ ಮನಸು || ೩೩ || ಲೋಕದ
ಜನರು ಕಾಣುವ ಸ್ವಪ್ನವೆಲ್ಲ | ಈ ಕನಸು | ರಾಮಬ್ರಹ್ಮಾನಂದವೇ ಅ
ನಾನೊಂದು ಅದ್ಭುತದ ಸ್ವಪ್ನವನು ಕಂಡೆ ನೋಡಿ || ೩೪ ||

## ಶ್ರೀ ಶಿವನ ತತ್ವ.

ಶಿವಪೂಜೆಯನು ಮಾಳ್ಪ ಶಿವಭಕ್ತರಿನ್ಯಾರು | ಭವಭವಾದಿಗಳ
ಭಕ್ತಿಯಲಿ ನಿಂದು ||ಪ|| ತನುವೆಂಬೋ ಕಾಯದೊಳು ತತ್ವವುದಕವ
ಅನುಮಾನ ಷಡ್ಗುಣ ದೀಪವನ್ನಿಕ್ಕಿ ವಿನಯದಿ ವಚನವಮಾಳ್ಪರಿನ್ಯಾರು
ಧ್ಯಾನಧಾರಣವೆಂಬೊ ಜ್ಞಾನಪುಷ್ಪವತಂದು ಹೀನ ವಿಷಯಗಳೆಲ್ಲ ವಿ
ಮಾಡಿ | ಮಾನಾಭಿಮಾನಗಳ ಮಮತೆಧೂಪವಹಾಕಿ || ನಿತ್ಯನೇವೇದ್ಯ
ಮಾಳ್ಪರಿನ್ಯಾರು ||೨|| ನಿತ್ಯಸಾಧನೆಯೆಂಬೊ ಸತ್ಯಅನ್ನವಮಾಡಿ | ಉ
ಸ್ಥಿತಿಲಯದ ತಟ್ಟೆಯನು ತೆಗೆದು ಆತ್ಯಂತ ಆನಂದ ಅಮೃತ ಗೃಹ

ಾಕಿ । ನಿತ್ಯ ನೇವೇದ್ಯವ ಮಾಳ್ಪರಿನ್ಯಾರು॥ಪಂಚತತ್ವ ಭಾಪದೊಳು ಪಂಚ ಾತ್ರೆಯ ತೆಗೆದು । ವಂಚನೆ ಬತ್ತಿಗಳನೊಸೆದು ಹಾಕಿ । ಸಂಚಿತ್ಕಾರಿತುಪ್ಪ ತ್ಕಲವನು ಹಾಕಿ । ನಿಶ್ಚಿಂತಾರ್ತಿಯನು ಮಾಳ್ಪರಿನ್ಯಾರು॥೪॥ಏಕನಾದದ ಳಗೆ ಏಕಸಂಗನ ಕಂಡು ಲೋಕದುರ್ವಿಷಯಗಳ ಕರ್ಪೂರವ ಮಾಡಿ । ಾಕಾಬೊಸೆಸ ಅಜಮಂತ್ರವ ಪಿಡಿದು । ಏಕಾನಾಕಾರವೆಂತಿರ್ಪ ಮಂಗಳವ ಮಾಳ್ಪರಿನ್ಯಾರು ॥

## ರಾಮದಾಸ್ ತತ್ವ.

ಅಡಿಗೆಯನ್ನು ಮಾಡಬೇಕಣ್ಣಾ । ನಾವೀಗ ಜ್ಞಾನದ ಅಡಿಗೆಯನ್ನು ಮಾಡಬೇಕಣ್ಣಾ ॥ಪ॥ ಅಡಿಗೆಯನ್ನು ಮಾಡಬೇಕು ಮಥಿಸಬೇಕು ಮದಗ ನ್ನು ಒಡೆಯನಾಜ್ಞೆಯಿಂದ ಒಳ್ಳೇ ಸಡಗರಾದ ಮುಕ್ತಿ ಆದಕೆ ॥ ಅಡಿಗೆ ಯನ್ನು ಮಾಡಬೇಕಣ್ಣಾ ॥ ೨ ॥ ಮನೆಯ ಸಾರಿಸಿ ಮಡಗಬೇಕಣ್ಣಾ । ಆ ಳಿಕ ತನ್ನಾಘನದಿ ಗುರುವನ್ನು ನೆನೆಯಬೇಕಣ್ಣಾ । ಕನಸುಯೆಂಬುವ ಕಲ್ಮಷಂಗಳ । ವನಿಕೆಯಿಂದ ಕುಟ್ಟಿ ಕೇರಿ । ತನಗೆ ತಾನೆ ಆದ ಕರ್ಚನು । ಚ್ಚಿ ಅಡಿಗೆಯನ್ನು ಮಾಡಬೇಕಣ್ಣಾ । ತತ್ವಭಾಂಡವ ತೊಳೆಯಬೇಕಣ್ಣಾ। ತ್ಯಾತ್ಮನಾಗಿ ಆರಿಸಿ ಅಕ್ಕಿಯ ಮಥಿಸಬೇಕಣ್ಣಾ । ಕತ್ತಲೀಮನವೆಂಬೊ ಟ್ಟನು । ರತ್ತಿಯೆತ್ತಿವಲೆಯೊಳಾಕಿ । ಹತ್ತಿಕೊಂಡಿಹ ಮಮಕೆಯನ್ನು ತ್ತಿಯಸಾರ ಇಂಗಿಸಿನ್ನೂ । ಅಡಿಗೆಯನ್ನು ಮಾಡಬೇಕು ॥ ೩ ॥ ಜನನ ಕೊಂಡಿಗೆ ಹುರಿಯಬೇಕಣ್ಣಾ । ನಿಜವಾಗಿ ನಿಂತು ತನುವು ತುಪ್ಪವಕಾಯಿಸ ಬೇಕಣ್ಣಾ ॥ ಕನಕಗಿರಿ ಗುರುರಾಮದಾಸರ ಕಂಟಕ ಕಳೆಯೊಟ್ಟಳುಂಟು ಸುಖದಾ । ಅಡಿಗೆಯನ್ನು ಮಾಡಬೇಕಣ್ಣಾ ॥ ೪ ॥

## ಚಿದಾನಂದರ ತತ್ವ.

ಕಾಣಬಾರದಂಥ ಶಿವನ ಕಂಡೆನವ್ವಾ । ಯನ್ನ ಪ್ರಾಣಕಾಂತ ಎನ್ನೊ ಳಾಗೆ ಪ್ರಾಣವವ್ವಾ ॥ಪ॥ ಕಣ್ಣಾಗಾಕೊಯೊವಳಗೆ ಲಿಂಗವವ್ವಾ।ವೊಸಂಗ ಸುಖಕೂಡಿ ಜನರ ಸಂಗವವ್ವಾ ಕಾಣ ॥ ಓಂಕಾರಪ್ರಣವದ ಮೂಡಿವಾ ಯಿತವ್ವಾ।ಸರಸವಾಗಿ ಸಮರಸಬೆರದೀತವ್ವಾ ಕಾಣ॥೨॥ಈಳೀಗೆಜಲಮಳ ದೊಳು ಶರಭವವ್ವಾ।ಗುರುಶರಭವವ್ವಾ।ಯನ್ನ ಪಿತನ ಕರುಣದಿಂದಪಾಪಡೆ ಬರವವ್ವಾ, ಭಾವಮೋಕ್ಷವವ್ವಾ।ಕಾಣಬಾರದಂಥಾ ಶಿವನ ಕಂಡೆವವ್ವಾ॥

## ಪುರಂದರದಾಸರ ತತ್ವ.

ಇನ್ಯಾಕೊ ಯಮನ ಬಾಧೆಗಳೂ । ಯನ್ನ ಜಿಹ್ವೆಯೊಳಗೆ ಹರಿಧ
ವಂದಿರಲೂ । ಇನ್ಯಾಕೊ ॥ಪ॥ ಪತಿತಪಾವನನೆಂಬೋ ನಾಮಾ। ಇನ್ನು
ತವು ಯತಿಗಳು ಸ್ತುತಿಸುವೋ ನಾಮಾ । ಜಿತತೆವಂದಿದ್ದರೆ ನಾಮಾ । 
ತಿಯ ಪಾಲಿಸುವಂಥಾ ಅತಿಶಯ ನಾಮಾ । ಇನ್ಯಾಕೊ ॥೧॥ ಇದಕೆಪ್ರ
ದನು ಸಾಕ್ಷೀ । ಇನ್ನು ಕನ್ಯೆಶಿರೋಮಣಿ ದ್ರೌಪದಿಸಾಕ್ಷಿ ಚಿನ್ನದೊಂ
ಮಿಳ ಸಾಕ್ಷಿ ನಮ್ಮ ಪುಣ್ಯಲೋಕವನಾಳ್ವ । ಧೃವನೊಬ್ಬ ಸಾಕ್ಷೀ । ಇ
ಹದಿನಾಲ್ಕು ಲೋಕವನಾಳ್ವ । ನಮ್ಮ ಮದನಜನಕನಾಗಿ ಮುದದಿಂದಬಾ
ಪದುಮನಾಭನಾಗಿ ನಿಲ್ವಾ । ಗುರುವಾದ ಪುರಂದರ ವಿಠಲನಕಾಯ್ವಾ ।

## ಚಿದಾನಂದರ ತತ್ವ.

ಆರು ಅರಿಯರು ನಮ್ಮೂರು । ಗುರುಭಕ್ತರಿಗೊಲಿವುದು ನಮ್ಮೂ
ಆರು ॥ಪ॥ ಅಂಬರದೊಳಗೆ ನಮ್ಮೂರು । ತ್ರಿಯಂಬಕನಿರುವುದು ನಮ್ಮೂ
ಇಂಬುಕಾಣೊ ನಮ್ಮೂರು । ತುಂಬಿದ ಬೆಳಕು ನಮ್ಮೂರು॥ಅಕ್ಷಯದೊ
ನಮ್ಮೂರು । ನಿಕ್ಷೇಪವಿರುವುದು ನಮ್ಮೂರು । ಲಕ್ಷಕಾಣೋ ನಮ್ಮೂ
ಪಂಚಾಕ್ಷರಿ ವೇಹಿನೆ ನಮ್ಮೂರು ಆರು ॥೨॥ ಬೈಲಿಗೆ ಬೈಲೇ ನಮ್ಮೂ
ಬೈಲುಬ್ರಹ್ಮನೇ ನಮ್ಮೂರು । ಭವಹರನಿರುವುದು ನಮ್ಮೂರು।ಭವಪಾಶ
ವದ । ನಮ್ಮೂರು ಆರು ॥೩॥ ಮಂಡಲ ತುದಿಯಲಿ ನಮ್ಮೂರು ।
ಕಂಡವರಿಲ್ಲಾವೂ ನಮ್ಮೂರು । ಖಂಡಿತ ಜಗದೊಳ್ ನಮ್ಮೂರು ।
ಮಂಡಲ ಸ್ಥಳದೊಳ್ ನಮ್ಮೂರು ಆರು ॥೪॥ ಪರಾತ್ಪರದೊಳು ನಮ್ಮೂ
ಪರದೇಶಿಗಳಿರುವುದು ನಮ್ಮೂರು । ಪರಿಸೇ ತುಂಬಿತು ನಮ್ಮೂರು।ಗುರು
ಯೊಳಿರುವುದು ನಮ್ಮೂರು ಆರು ॥೫॥ ಭೂಪಚಿದಾನಂದನ ಪಕೀರ
ಜೋಲಿಕೆಯುಲ್ಲಿರುವುದು ನಮ್ಮೂರು । ಆರು ಅರಿಯರು ನಮ್ಮೂರು

## ಆತ್ಮವಿಚಾರ ತತ್ವ.

ನಮಗ್ಯಾರಿಲ್ಲಾ । ನಮಗ್ಯಾರಿದ್ದರೇನಯ್ಯ ಮಹಲಿಂಗ ಪ್ರಭ
ದಾರಿಸುವಿಲ್ಲಾ । ನಿಂತ ನೀರವಮ್ಯಾಗಳ ಗುಳ್ಳೇ ನಿಜವಿಲ್ಲೋ ಪ್ರಭ
ನಮಗ್ಯಾರಿಲ್ಲ ॥ಪ॥ ತಾಯಿತಂದೆಗಳಿಲ್ಲಾ । ಬಂಧುಬಳಗವಿಲ್ಲಾ । ಇ
ಪರದೇಶಿ ನಾನಾದೇ । ಮಹಲಿಂಗ ಪ್ರಭುವೇ।ನಮಗ್ಯಾರಿಲ್ಲಾ ॥೧॥ ಅಡ

ರುಣೆಯಾಡಿ ಗಿಡಕೆತೊಟ್ಟಿಲುಕಟ್ಟಿ । ಇಂಥಾ ಸುಡಗಾಡು ಬಟಬೈಲು ಔಕ್ಯ್ಕರು ಶಿವನೇ । ನಮುಗ್ಯಾರಿಲ್ಲಾ ॥೨॥ ವೃಕ್ಷವಳ್ಳೇದೆಂದು ನೆರಳೀಗೆ ನಾ ಪೋದೇ । ವೃಕ್ಷಾವನೆರಳೀಗಿ ಬೆಂಕಿಕೆಂಡ ಶಿವನೇ । ನಮುಗ್ಯಾರಿಲ್ಲಾ ॥ ಭಾವಿ ಒಳ್ಳೇದೆಂದು ಭ್ರಮಿಸಿ ನೀರಿಗೆ ಪೋದೆ । ಭಾವಿಯು ಜಲಬತ್ತಿ ಬಟ ಬೈಲೊ ಶಿವನೇ । ನಮುಗ್ಯಾರಿಲ್ಲಾ ॥೪॥ ಕಂಚೀಗೆ ಧ್ವನಿಯುಂಟು ಧ್ವನಿಗೆ ವತ್ತೀಯುಂಟು । ನಾನಿಲ್ಲಿಕೂಗಿದ ಕೂಗು ಗಗನಕೇಳಿತೋ ಶಿವನೆ । ನಮು ಗ್ಯಾರಿಲ್ಲಾ ॥೫॥ ನಮುಗ್ಯಾರಿದ್ದರೇನಯ್ಯ ಮಹಲಿಂಗಪ್ರಭುವೇ । ದಾರಿ ಸುಖ ವಿಲ್ಲಾ । ಇಂಥಾ ನೀರವ್ಯಾಗಳ ಗುಳ್ಳೀ ನಿಜವಿಲ್ಲೋಪ್ರಭುವೆ ನಮುಗ್ಯಾರಿಲ್ಲ॥

## ಅಲ್ಲಮಪ್ರಭುವಿನ ಆತ್ಮವಿಚಾರ ತತ್ವ.

ಅಲ್ಲಮಪ್ರಭು ನಿದ್ರೆಯುವಮಾಡಿದನೇ।ಪರತರ ಮುದ್ರೆಯ ನೋಡಿದನೇ ಸಿದ್ಧವಾದ ಶಿವಲಿಂಗನ ಬೆಳಕಿನಲ್ಲಿ । ಊರ್ಧ್ವಾದಪ್ರಣವದ ಮಣಿಮಯ ಪೀಠದಿ ॥ಪ॥ ಆಧಾರದಮೇಲೆ ಹರುವಿನ ವೇದಿಕೆಗಳ ನೋಡಿ ಹರಿಯಿಲ್ಲದಿಹ ಮಣಿಮಯಪೀಠದಿ ಏರಿಸು ಸುಸುಮ್ನದದಾಮದ ಮಧ್ಯದಿ । ನಿದ್ರೆಯ ॥ ಪವಡದ ಮಂಟಪದಿ ದ್ವಿದಳಾರವಿನೂಲಾಗ್ರದಲ್ಲಿ । ದೇವಾರ್ನಿಕ ಮಧ್ಯದ ನಡುವೆ ಶಿವಸೋಹಂ ಎಂಬೊ ಹನ್ಮಿನ ಬೆಳಕಿನಲಿ । ನಿದ್ರೆಯ ॥೨॥ ಕಾಲ ವೇಷದ ನಡುವೆ ಮಿಂಚಿನ ಸಾಲಿನ ಪವಳದಲಿ ಬಾಳನೇತ್ರನ ಭಜಿಸುತ ಪಾಡುತ ॥ ಬಾಲನತೊಟ್ಲ ಕೀಲಿನ ಮನೆಯೊಳು । ನಿದ್ರೆಯ॥೩॥ವೊದಲು ಗಂಡನ ಬಟ್ಟೊ ಈ ಲೋಭಿ ಚದುರತನದಿ ಕಂಡೂ । ಕದನವ ತೆಗೆದು ಕೈಪಿಡಿದು ತ್ರಿಕೂಟದ ಮಪನನ ಸಾಲಿನ ಮಂಟಪವೆಡೆಯೊಳು । ನಿದ್ರೆಯ ಆರುಕಾಲಿನ ಮಂಚಾ ಪಕೆ ಸೇರಿದ ಸರಪಳಿಯೂ । ಧೀರಕನವಾ ಪಿಡಿನಾ ಮ್ನಾಕ ಸವಿಯುತ ಸಾರಾವಸ್ತುವ ಹೊದಿಸುತ ಹಾಸುತ । ನಿದ್ರೆಯ ॥ ೫ ॥ ಮಾನಿನಿ ಬಾಯಿಯೊಳು ಕಿಡಿಯು ಪಸರಿಸಿ ಭಾನುಮಂಡಲಕುನಿಸಿ । ನಾನನಿ ಯೆಂಬುವೊ ಮದಗಳ ಸುಡುತಲಿ । ಜ್ಞಾನವೃಕ್ಷದ ಮಾವಿನ ನೆರಳೊಳು । ನಿದ್ರೆಯ ॥೬॥ ಎಲ್ಲಿನೋಡಿದರಲ್ಲಿ ಬೆಳಕೂ ನಿಲ್ಲದೆ ಪಸರಿಸಿಭೂ । ಅಲ್ಲಮ ಪ್ರಭುವಿನ ಸಂಗಮ ಬಸವನಮೇಲದಿಗಳ।ಕರುಣಾಮೃತಸವಿಯುತ ನಿದ್ರೆಯ

## ಕೊಂಡಗುರು ಆತ್ಮವಿಚಾರ ತತ್ವ.

ಊರು ಚಂದಾಗಿರಿಸಬೇಕಣ್ಣಾ । ಉತ್ತಮರುಕೂಡಿ ಊರು ಚಂದಾ ಗಿರಿಸಬೇಕಣ್ಣಾ ॥ ಪ ॥ ಊರು ಚಂದಾಗಿರಬೇಕು ಉತ್ತಮರು ತಾ ಬೆರಿಯ

ಬೇಕು | ಮತ್ತೆ ಮಾತಾಪಿತರ ಪೂಜೆ ಸತ್ಯದಿಂದಲಿ ಮಾಡಬೇಕು
ಚಂದಾಗಿರಿಸಬೇಕಣ್ಣಾ|ಕರ್ಮಕತ್ತಗಳಳಿಯಬೇಕಣ್ಣಾ ಕಾಲನಿಗೆನಿ
ಧಾರೆಯನೆರೆಯಬೇಕಣ್ಣಾ | ದುರ್ಮದಂಗಳನಳಿಯಬೇಕು ದೂರ
ನೋಡಬೇಕು | ಪಾರಮಾರ್ಥವ ತಿಳಿಯಬೇಕು ಪರಮಪದವಿ
ಬೇಕು | ಊರು ಚಂದಾಗಿರಿಸಬೇಕಣ್ಣಾ || ೨ || ಮೂಲಮೂಲವು
ಬೇಕಣ್ಣಾ | ಮೂರೊಂದುಗೂಡಿದ ದಾರಿಯಾವುನೊ ನೇಡಬೇಕಣ
ಮಕ್ಕಳಪಡೆಯಬೇಕು ಮುರಹರನ ನೆನೆಯಬೇಕು ಚೋರಬುದ್ಧಿಯ
ಬೇಕು | ಸೋಹಂಭಾವದಿ ನಡಿಯಬೇಕು ! ಊರು ಚಂದಾಗಿರಿಸಬ
|| ೩ || ಕಾರುಕತ್ತಲೆಕವಿಯುತಿದೆಯಣ್ಣಾ|ಅಜ್ಞಾನವೆಂಬೋ ಚೋರ
ಪತನಕಾಣಣ್ಣಾ | ಊರುದಾರಿಯು ಚಾರುಚಾಪದ | ಮೇರು
ಮಧ್ಯಬೆಳಗುವೊ | ಧೀರಭಾಸ್ಕರನುದಯವಾದದ್ದು|ತೋರುತಿದೆತ್ತಿ
ವೆಲ್ಲ | ಊರು ಚಂದಾಗಿರಿಸಬೇಕಣ್ಣಾ || ೪ || ಆರುಮತಗಳ
ಬೇಕಣ್ಣಾ | ಅಷ್ಟಾಂಗಯೋಗದ ದಾರಿಯಾವದೊ ತೋರಬೇ
ತೋರುಯೆಂಬೋದೇನು ಲೋಕದ| ಭಾರಕರ್ತನ ಪಾದಮಹಿಮೆಹಿ
ಭಜಿಸುವರಾರು ಸದ್ಗುರುಸಾರಸಾಧ್ಯ ಸಮವ್ಯಾಪ್ಯಾ ಸತ್ಯನಾ|ಊರ
ಗಿರಿಸಬೇಕಣ್ಣಾ || ಕೊಂಡೆಗುರುಪರದೈವ ಕಾಣಣ್ಣಾ|ನಂಬಿದವರಿಗೆ
ಜನ್ಮಗಳಿಲ್ಲ ಕಾಣಣ್ಣಾ | ಹಿಂದುಮುಂದನು ತಿಳಿಯಲೋ ಕಂದ |
ಮತಿಗಳು ಬಂದುಸೇರದೆ|ಇಂದಿರೇಶನ ಮಂದಿರದಿ|ಸುಖವೆಂದು ಸೇ
ಷುಖ್ಯಾ ಊರು ಚಂದಾಗಿರಿಸಬೇಕಣ್ಣಾ ||

## ಮಲ್ಲಾರ್ಯನ ತತ್ವ.

ಎಂಥಾ ಕನಸು ಕಂಡೇನೇ | ಕೇಳಮಾ ನಾನೆಂಥಾಕನಸು ಕ
ಎಂಥಾ ಕನಸುಕಂಡೆ | ಕಂತೂಜನಕನಾಣೆ | ಪಂಥಾಮಾಡಿ ನಾನ
ಬೊಳಿನ್ನು ||ಪ|| ಮೂರಾರುವಂದರಲ್ಲೀ ಸಹಜವೆಂದು ಸೇರಿ ನಾನೇ
ಆರಿಗು ಅಳಿವವಲ್ಲ ದಾರಿಯಾಗಿರುವಂಥಾ | ಘೋರಾಂಧಕಾರ ವಿಚ
ವೇದಶಾಸ್ತ್ರಗಳೆಲ್ಲವೂ ಇದಕೆ ಮಾಿದಾದಿಪಂಚಕವೆಲ್ಲವೂ | ನಾ
ಅಲ್ಲಾ ಗಾದೆಪುರಾಣವಲ್ಲಾ|ಆದಿಅಂತ್ಯದ ಮೇಲಕ್ಕಾರಿಹೋಯಿತು

ಎಂಥಾ ||೧|| ಅಂದವಾಯಿ ನೋಡಲೂ । ನೋಡಿದರಿಂದ ಬಿಂದುಕಳೆಯ ನಾಗಲು । ಒಂದೆರಡಾದಂಥಾ ಚಂಡಾವುಳಿಯಾಲೂ । ಹಿಂದೆ ಬಾಳಿದಬಾಳು ಎಂದಿಗಿಲ್ಲದಂತೆ ಎಂಥಾ || ೨ || ಬಿಟ್ಟದಂತಿರುತಿಹುದುಜನ್ಮಾ।ಕರ್ಮಸುಟ್ಟು ಬೂದಿಮಾಡೋದು । ಗುಟ್ಟಗೋರಾಡಲು ದಿಟ್ಟವಾಗಿರುವದು । ನೆಟ್ಟನೆ ಮನೆಯೊಳು ಪುಟ್ಟಿತು ನಿನ್ನಲ್ಲಿ ಎಂಥಾ ||೩|| ಹೇಮವರ್ನದಪೀಠವು ನಿಂತದ ಕನ್ನ । ನೇಮನಿಷ್ಠೆಗಳಿಲ್ಲಿವು ಕಾಮನಂತಿರುವೊ ನಿಷ್ಕಾಮುಕನ ಚರಿತೆಯೊಳು ಆ ಮಹಾದೇವ ಮಲ್ಲಾರ್ಯನ ಕೃಪೆಯಿಂದ || ೪ ||

## ತತ್ವ.

ಎನ್ನವ್ವಾಕಲ್ಲಾಬಿಡೇ ಈ ಧೋತ್ರವು ಚನ್ನಾಗಿ ವಗಿಯಬೇಕು ||ಪ|| ಮುನ್ನಮಾಡಿದ ಪಾಪಕರ್ಮ ಹೋಗುವಹಾಗೆಚೆನ್ನ ಕೇಶವನ ಪ್ರಾಸಾದಕ್ಕೊದಗಬೇಕು । ಎನ್ನವ್ವಾ ಕಲ್ಲಾಬಿಡೇ || ೧ || ವೇದನೋಡಬೇಕೂ ಮನದೊಳಿದ್ದ ಭೇದವ ತಿಳಿಯಬೇಕೂ ಸಾಧಾರಣೆಯಿಂದ ತಿಳಿದು ನಿಶ್ಚಯವಾಗಿ । ಕ್ರೋಧಕರ್ಮಗಳೆಲ್ಲಾ ಬಿಟ್ಟುಹೋಗುವಹಾಗೆ । ಎನ್ನವ್ವಾ ಕಲ್ಲಾಬಿಡೇ || ವೆಲ್ಲಾಪುರಿಯ ಚಲುವಕೇಶವನಪ್ರಸಾದಕ್ಕೆ।ಆಲಸ್ಯಮಾಡದೆ ಕೋಪೂರನೂ ಬಂದು ದ್ವಾರವತ್ತಿನಲಿನಿಂದು ನೀಲಕುಂದತ್ವಕಲ್ಲಾಬಿಟ್ಟು ಆಕಡೆಸಾರವ್ವಾ ಎನ್ನವ್ವಾ ಕಲ್ಲಾಬಿಡೇ || ೩ ||

## ಪುರಂದರ ತತ್ವ.

ಯಾಕೆ ಮೂರ್ಖನಾದೋಮನುಜ । ನೀನ್ಯಾಕೆ ಮೂರ್ಖನಾದೋ । ಯಾಕೆ ಮೂರ್ಖನಾದೆ ನೀನು । ಕುಹಕಬುದ್ಧಿಯ ಬಿಡು । ಲೋಕನಾಥನ ನೆನೆಯಬೇಕು ಮನುಜ।ಯಾಕೆ ||ಪಲ್ಲವಿ|| ಸಾಧುಸಜ್ಜನರ ಸಂಗವಮಾಡು । ಭೇದಭೇದವ ತಿಳಿದುನೋಡು । ಮಂದಬುದ್ಧಿ ಮಾಡಬೇಡವೊ ಮನುಜ । ಯಾಕೆ || ೧ || ಹೆಂಡರು ಮಕ್ಕಳು ತನ್ನವರೆಂದು । ರೊಕ್ಕವಾದರು ಘಳಿಸಿಕೊಂಡು । ಸೊಕ್ಕಿನಿಂದ ತಿರುಗುವರೇನೋ ಮನುಜ ಯಾಕೆ || ೨ || ದಾನಧರ್ಮವನು ಮಾಡು । ಜ್ಞಾನದಿಂದ ತಿಳಿದುನೋಡು । ಹೀನಬುದ್ಧಿ ಮಾಡಬ್ಯಾಡವೊ ಮನುಜ ಯಾಕೆ || ೩ || ರಕ್ಕಸಾ ಯ ಮದೂತರು ಬಂದು।ಲೆಕ್ಕವಾಯಿತು ಹೊರಡುಯೆನಲು । ನಕ್ಕವರೆಲ್ಲಾ ಬಿಡಿಸುವವರೇ ಮನುಜ । ನೀನ್ಯಾಕೆಮೂರ್ಖನಾದೆ ||೪|| ಅರಿಷಡ್ವರ್ಗದಆಟವಬಿಡು।ಪುರಂದರವಿಠಲನ

ಧ್ಯಾನವಮಾಡು ಹರಿಯುಸೇರಿಗೋ ಹಾದಿಯನ್ನೊ ಡ... ಮನುಜ । ...
ಮೂರ್ಖನಾದೋ ॥ ೫ ॥

## ರುದ್ರಾಕ್ಷಿಮಹಿಮೆ ತತ.

ಹರಹರಯೆನುತಲಿ ರುದ್ರಾಕ್ಷಿ । ಧರಿಸಲು ... ಭವಗಳ ...
ಪರಮಭಸಿತ ರುದ್ರಾಕ್ಷಿ । ಧರಿಸಲು ಫಲಿಸುವ ... ರುದ್ರಾಕ್ಷಿ । ...
ಶೈವದಾಚಾರವ ಮುಕ್ತಿಯ ॥ ದಾರಿಯತೋರುವ ... ರುದ್ರಾಕ್ಷಿ । ...
ನಿಂದು ನಿತ್ಯವು ಜಪಿಸಲು । ಶ್ವಾಸವು ಕೊಡುವದು ರುದ್ರಾಕ್ಷಿ । ...
ಭೂತಗಳ ಘೋರಮೃಗಭಯ । ಹರಿಸಿದೊಡೆವುದು ರುದ್ರಾಕ್ಷಿ । ...
ಮಣಿಯಿಂದು ಶುನಕಗೆ ಕಟ್ಟಲು ಗಣವದು ತೋರಿತು ರುದ್ರಾಕ್ಷಿ । ...
ಗೊಂಡವನು ಗಾಂಧರ್ವ ಧರಿಸಲು ಕೆಣವದು ತೋರಿತು ರುದ್ರಾಕ್ಷಿ ...
॥೩॥ ಇನಶಶಿ ಹರಿಯಜ ಇಂದ್ರರು । ಸುಗುಣಾಶ್ರಮ ಮುನಿಗಳು ಜಪಿ...
ರುದ್ರಾಕ್ಷಿ । ಧರಿಪರಿಯಿಂದಲಿ ಶರೀರದ ಮಸ್ತಕ... ...ಳು ಧರಿಸಲು । ...
ಪದವಿ ಕೊಡುವದು ರುದ್ರಾಕ್ಷಿ । ಕರದೊಳು ಭುಜದೊಳು ಕರ್ಣದಿ ಧರಿಸ...
ಸ್ಥಿರಪದವನು ಕೊಡುವದು ರುದ್ರಾಕ್ಷಿ । ಧರೆಯೊಳು ... ಬಸವನ...
ಮುದುಕದು ಪುರನಿವಾಸನ ಧರಿಸುವ ರುದ್ರಾಕ್ಷಿ ॥ ಹರಹರಯೆನುತಲಿ ರುದ್ರಾ...

## ಶಿವಪಂಚಾಕ್ಷರೀ ಮಹಿಮೆಯು ತತ್ವ.

ಓನ್ನಮೋ ಗುರುಪಂಚಾಕ್ಷರೀ ಮಂತ್ರವ ವರ್ಣಿಸಿ ಕರಿಸಿದರೀ...
ಉನ್ನತಪಾತಕ ಶೂನ್ಯದೋಷ ಶತಚೂರ್ಣವಮಾಡುವದೀಮಂತ್ರ । ...
ಶಾಲೆಯೊಳು ಸನ್ಯಾಸಿಗಳಿಗೆ । ಅಮ್ಮದುಕಾಗುವದೀಮಂತ್ರ ॥ ಚನ್ನಬಸ...
ಗುರು ಚರಣಗಣಂಗಳು । ಮಾನ್ಯರು ಪಠಿಸುವುದೀಮಂತ್ರ ॥ ಪನ್ನಗವಶ...
ಭೂತಮೃಗದಭಯ । ನಿರ್ನಯಮಾಡುವದೀಮಂತ್ರ ಪವನ ಪಾರ್ಥರು ...
ಸಲು ಭಕ್ತಿಲಿ । ಶಿವಕೃಪೆ ತೋರಿದುದೀಮಂತ್ರ । ...ವಪಟ್ಟದಿ ಮುನಿಸ...
ಜಪಿಸಲು । ಭವಗಳ ಹರಿಸುವುದೀಮಂತ್ರ ॥ ಭುವನಾದವೃದ್ಧಾರುಬಾಲ...
ಪಠಿಸಲು । ನವಗ್ರಹ ಬಿಡಿಸುವುದೀಮಂತ್ರ ॥ ೨ ॥ ಚಂದ್ರಸೂರ್ಯರು ...
ಅಜಗಾಸುರರು । ಇಂದ್ರರು ಪಠಿಸುವುದೀಮಂತ್ರ ॥ ಮಂಧರಗಿರಿಯಲಿ ಮು...
ಗಳು ಗಣಪನು । ಇಂದು ಜಪಿಸುತಿಹುದೀಮಂತ್ರ ॥ ಚಂದದಾ ರಸಿ...
ನಂದಿಯ ಮುರಹರ ಕಂದುಗೊರಳನದೀಮಂತ್ರ ॥ ೩ ॥

## ನಿಜಗುಣ ಶಿವಯೋಗಿಯುವರ ತತ್ವ.

ಬಿಡು ಲೌಕೀಕದ ಪಂಡಂಬಕ ನಡತೆಗಳೆಲ್ಲಾ। ಮುಂದೆ ಕೇಡು ಬರುವು ಲ್ಲದೆ ಕಡೆಗೆ ಆದರೊಳೇನು ಸುಖವಿಲ್ಲ ಬಿಡು॥ಪ॥ ಹೆತ್ತತಾಯ್ತಂದೆಪಾಲಿಟ್ಟ ಪ್ರೋಷಿಸಿದರೆಂದು ॥ ಅತ್ಯಧಿಕದಿ ಗಳಿಸಿದಾ ಧನಧಾನ್ಯ ನನ್ನದೆಂದೂ। ಕತ್ತೆ ಯಂತೆ ಇಹಪರಕೆ ಸುತ್ತಿ ಸುಳಿಯುತಲಿ ಒಂದು ಸತ್ತುಹೋಗುವಲ್ಲದೆ ಸೌಖ್ಯಪಡುವರೊಬ್ಬರಿಲ್ಲಾ । ಬಿಡುಲೌಕೀಕದ ॥೧॥ ಕಳ್ಳಕಾಕತನದಿ ಲೋಕ ದೊಳಗೆ ಕಾಲವ ಕಳೆದು । ಒಳ್ಳೇಮಾತಿನೊಳಗೆ ಪ್ರಾಣಿಗಳ ವಿಷವನೆರೆದು। ಕೀಳುಕೊಡುವರೆಂದೆನುತಲಿ ಬಚ್ಚಿಡಿಮ!ಕೊಳ್ಳದೆವ್ವದಂಕೆಕುಣಿಯುವದಲ್ಲದೆ ಬ್ಯಾರೆ ನಿನಗೆ ಗತಿಯಿಲ್ಲ। ಬಿಡು ಲೌಕೀದಕ॥೨॥ ಕನಕಾದಿ ವಸ್ತುಗಳುತನಗಾ ಗುವುದೆಂದು ಘಳಿಸಿ। ಮನಬಂದತೆರದಲೀ ಮಾನಿನಿಯರನುಭವಿಸಿ।ಅಜ್ಞಾನ ದಾ ದ ದುರ್ಮಾರ್ಗದೊಳಗೆ ಜ್ಞಾನವೈಸಿ।ಅನುಪಮಿತ ಶಿವನ ತಾ ನೆನೆಯದೆ ಮರೆತಿಹರಲ್ಲಾ।ಬಿಡುಲೌಕೀಕದ॥೪॥ನಾನು ನೀನುಯೆಂಬೊ ಬಹು ಹೀನತ್ವ ದಲಿ ನಿಂದು। ಗತಿನೋಕ್ಷದ ಕಾಣದೆ ಸುತ್ತಿ ಸುಳಿವಂತಾಯ್ತು । ಯೋನಿ ಮಾರ್ಗದೊಳಗೆಮುಣಗಾಡಬೇಕು ಇನ್ನೆವೃತ್ಯಗುರುಸಿದ್ಧಲಿಂಗೇಶನಕರುಣ ಬಾರದೇ ಹಗಲಿರುಳೆಲ್ಲಾ । ಬಿಡುಲೌಕಿಕ ಪಂಡಂಬಕ ನಡತೆಗಳೆಲ್ಲಾ ॥

## ಶಿವಮಹಿಮೆಯ ತತ್ವ.

ಎಲ್ಲಿನೋಡಿದರಲ್ಲಿ ಶಿವನು ನಿನ್ನಲ್ಲಿಹನು ನೋಡಣ್ಣಾ।ಬಲ್ಲಜಾಣರೊಳು ತಿಳಿದು ನಿರ್ಮೋಹ ಉಲ್ಲಾಸಭಕ್ತಿಯ ಮಾಡಣ್ಣಾ ॥ ಪ ॥ ಕಾಶೀರಾಮೇಶ್ವರ ಹಂಪೆಯು ದೇಶವ ತಿರುಗಿದರಿಲ್ಲಣ್ಣಾ।ಮಾಸಶ್ರಾವಣ ಶಂಕರಾತ್ರಿ ಉಪವಾಸ ಮಾಡಿದರಿಲ್ಲಣ್ಣಾ।ಸಹಸ್ರನಾಮವು ಶಾಸ್ತ್ರಪುರಾಣವು ಸಾಧಿಸಿಕಲಿತರಿಲ್ಲಣ್ಣಾ । ಎಷ್ಟುಕಾಲದೊಳು ಬ್ಯಾಸರವಿಲ್ಲದೆ ತಪಸ್ಸುಮಾಡಿದರಿಲ್ಲಣ್ಣಾ । ಸಿರಿಸಂಪತ್ತು ಜರಿದು ಆರಣ್ಯವು। ಚರಿಸಾಡಿದರು ನಿನಗಿಲ್ಲವಣ್ಣಾ।ಪರ್ವತಕೋಗಿ ಪಾತಾಳ ಗಂಗೆಯೊಳುತಲೆಬೋಳಿಸಿದರಿಲ್ಲಣ್ಣಾ ॥೨॥ ಹರಿವನೀರೊಳುಮುಳುಮುಳುಗಿ ನೀ ಬೆರಳುಗಳೆಣಿಸಿದರಿಲ್ಲಣ್ಣಾ । ಅರವುಗೆಟ್ಟು ಆಕಾರದಿ ಬೇಗನೆ ಪುರಾಣ ಕೇಳಿದರಿಲ್ಲಣ್ಣಾ । ಪರಿಪರಿನೇಮ ವ್ರತಗಣಕೀಪರಿಶೀಲವ ಮಾಡಿದರಿಲ್ಲಣ್ಣಾ ॥ ಸತ್ಯವಪಿಡಿದು ಸತ್ಯವನಳಿದು ತಾವುತ್ತೆ ಹೇಳುವೆ ಕೇಳಣ್ಣಾ ॥೪॥ ಹಸ್ತವಂ ತರಿಗೆ ತುತ್ತನ್ನವನು ನೀ ಮತ್ತೆ ಮಾಡುವದು ದಾನವಣ್ಣಾ । ಚಿತ್ತದೊಳು

ಶಿವಗೊತ್ತನರಿಯದೆ ಎತ್ತ ತಿರುಗಿದರಿತಣ್ಣಾ । ಕರ್ತ ಸೋಮ ಕರ್ತೃಬ
ಭಕ್ತಿಯಲ್ಲಿ ಶಿವನು ನಿನ್ನಲ್ಲಿಹನು ನೀನೋಡಣ್ಣಾ ॥ ೪ ॥

## ಕೊಟಲೂರೇಶ್ವರನ ತತ್ವ.

ಏನೂಹೇಳಲಿ ಯನ್ನ ಅಜ್ಞಾನವಶವಾಗಿ । ನಾನೂ ನನ್ನನು ಮರ
ನಾನಾಜನ್ಮವತಿರುಗಿ ಹೀನಮನ ಸಂಸಾರಿಯಾಗಿ ಸ್ವಾನೂರೂಪಕರಾದಿ ತ
ತಳನೇಕ ಧರಿಸಿಯು ತಿರುಗುತಿರ್ಪುದು ಏನೂ ॥ ೧ ॥ ಆತ್ಮನು ತಾನಾಗಿ
ತಕರಿಯದೋದೆ । ಭೂದೇಹವನೇ ನೆಚ್ಚಿ ಯಾತರಿಂದಲಿ ಬಂದಿತೆಮುಗಿ
ಜೀವಶಿವರಂತೆಂಬೋ ಭೇದವು ಮಾತುಮಾತಿಗೆ ಶಬ್ದಸೂತಕಾ ॥೨॥ ಗ
ಕತ್ತಲೆ ಮುಳುಗಿಪೋಪುದಾ । ಏನುಕಾರಣ ಮಾಯಕತ್ತಲೆ ತಾನೆ ಮುಸ
ತೋರುತಿರ್ಪುದು ನೀನು ನಾನೆಂಬೋ ಭೇದವು । ಏನುಕಾರಣ ತಿಳಿಯಗೆ
ದಿದು ॥ ಹರುಷಾವು ತಮ್ಮಲ್ಲಿ ಪರಿಪೂರ್ಣವಿರಲೇಕೆ ಶರಗೊಡ್ಡಿ ಬೇಡರ
ಹರನು ತಾನಾಗಿದ್ದ ತನ್ನನೂ ನರನಭಾವದಿ । ನಮಗೆ ಗುರುವು ಕೂದ
ರೇಶನನು । ಭವಚರಣಕಾಣದ ಮುದಲಾದುದಾ ಏನೂ ಹೇಳಲಿ ॥ ೪ ॥

## ಗಂಗಾಧರದ ತತ್ವ.

ಜೀವಪರಮನೊಳಗೈತೆ ಸತ್ಯವಿದು ಶಿವಶರಣಾರು ನುಡಿದಂತ ವ
ತೆಲವಿಕ್ಕರಿಸೊಮ್ಮುಕಾದು ನೀತಲವ್ರಾತಕರ್ಮವು ತೊಡಸಿನಪೋದು।ವ
ಭಾಂಡ ದೇಹ ನಿಲದು । ಯಾವ್ಯಾಳೋ ಏಗಡಿಯೋ ಎವರಿಕಿ ತಿಲಿಯದ
ಬಹುತುಷಾರ್ಷಿದಿಲ್‌ರಖನಾ । ದೇಖೋ ಬಾತ್ಕುಬಾತ್ಕು ಅಲ್ಲ ಕರ್ಮೋ
ಬೋಲೆತೇನಾ।ಕಿಸನೆದೇಖೊ ಅವತಾರೆ ಕೈಸಾತೇರವಾಡುಪಾರ।ಅರೆಏಕೆ
ದೇಖಿಂಗೆ ಘಂಟಬಜಾರೆ ॥ ೨ ॥ ಯಡಂಗುರುಪಾದಂ ನೀನೆಮರುಳೆ । ಅ
ವೇರಿರುಕಂಉಳ್ಳೆ ನಿಂಗುಳ್ಳೆಗದ್ದೆ । ಯಡಾಂಡಕಲ್ಪಾಂಪುಳ್ಳೆ । ನೀತಿತು
ಗುಳ್ಳೆತಾಮುಳ್ಳೆ ॥೩॥ ಮರಣ ನಿಶ್ಚಯವು ಎಂದಿದ್ದರೂ।ನಮ್ಮ ಗುರು ರ
ಲಿಂಗನ ನೆರೆನಂಬಿದವರು । ತಿರುಗಬಾರರು ಜನ್ಮಕ್ಕವರು । ನಮ್ಮವರಕ
ಪುರ ಗಂಗಾಧರನೋಳ್ ಸೇರುವರು ॥ ೪ ॥

## ತತ್ವ.

ಶೀಲವ ಮಾಡಬ್ಯಾಡಣ್ಣಾ।ನೀನುಮೇಲೆ ಮಾಡುವದೆಲ್ಲ ಸೂಳೇರ
ಹುಟ್ಟಿದ ಸ್ಥಳಕೂಲ ನೋಡಿ।ನೀ ಮುಟ್ಟು ರಕ್ತದೊಳು ಮುಳುಗಾಡಿ ಬ
ಬೈಲನೆನೀರಮಾಡಿಈಗಭ್ರಷ್ಟಾಪಬೇಡಣ್ಣಬರಿದೆನೋದಶೀಲವ।೧॥ಬಂ

ಯಜ್ಞದಿರಸವು|ಅದು ತುಂಬಿಸೋರುತಲಿ ಹೇಳಲೆನೊಸವು ಕುಂಭಿಣಿನರಕದ ಕಸವು|ಅದುಹಿಂಬಾಗೆನೋಡಣ್ಣ ಶಂಭುನಿನ್ನೊಳವು||೨||ಉದರದೊಳಿದ್ದಂತೆ ವಲಸು|ಅದು ಸದೆಬಡಿಸದೆಲ್ಲವ ಆಟವನೀಕಲಿಸೂ|ವದಗಿದುದಾ ಅನುಭವಿಸೂ ನಿನ್ನ ಹೃದಯದೊಳ್ಯಾವಾಗ | ಗುರುವನ್ನು ಭಜಿಸೂಶಿಲ||೩||ಕಳೆಯಬಾರದ ಕರ್ಮಬಂಧ | ಇದನಳಿದು ಬೇಕಾದರೆ ಗುರುಕೀಲಿನಿಂದ|ತಿಳಿಯಬಲ್ಲನೆ ಸೌಜ್ಞೆಯಿಂದ|ನಿನ್ನೋರ್ವಹನೆ ನೋಡೋ ಪರಮಾನಂದಶೀಲ||೪||ಇದುಸತ್ಯವೆಂದು ನೋಡ|ನಿಜವಸ್ತುಬೇಕಾದರೆ ಇದುಪಾಠಮಾಡ|ಚಿತ್ರಬುದ್ಧಿಯೊಳಿಂದಗೂಡ| ನಮ್ಮಯತಿ ನೋಡ ಈಶನ ಎಡಬಿಡದಾಡಿ | ಶೀಲವ ಮಾಡಬೇಡಣ್ಣ ||೫||

## ಗುಹೇಶ್ವರ ತತ್ವ.

ಅರಗಿಬಿತ್ತಲಿಲ್ಲ ಮೊಳದುದ್ದ ತೆನೆಯಾಯ್ತು ಶಂಭುಲಿಂಗ | ತಿನಬಂದ ಗಿಣಿಗಳು ಬಿದರಿಹೋಗುತಲಿದೆ ಶಂಭುಲಿಂಗ|ಹುಲ್ಲಾನೆಮೆಲ್ಲದು ನೀರುಕುಡಿಯದು ಶಂಭುಲಿಂಗ | ಹಿಡಿದರೆ ಮೊಲೆಯಿಲ್ಲ ಹಾಲನೆ ಕರಿಯುದು | ಶಂಭುಲಿಂಗ ||೨|| ಕರಿಯ ಹೆಂಟಿಯಮೇಲೆ ಬಿಳಿಯಬೀಜವ ಬಿತ್ತಿ ಶಂಭುಲಿಂಗ | ಕೊಂಬರುಂಟನ್ನ ತಿಂಬುವರ್‍ಯಾರಿಲ್ಲ | ಶಂಭುಲಿಂಗ || ೩ || ಮೂರು ಕಾಲಿನ ಪಕ್ಷಿ ನೀರೊಳು ನಿಂತಿದೆ ಶಂಭುಲಿಂಗ | ಪಕ್ಷಿಗೆ ರೆಕ್ಕಿಲ್ಲ ಹಾರಿತು ಗಗನಕ್ಕೆ ಶಂಭುಲಿಂಗ ||೪|| ಇಬ್ಬರು ಸ್ತ್ರೀಯರಿಗೆ ಒಬ್ಬಾನೆ ಪುರುಷಾನು ಶಂಭುಲಿಂಗ| ಪುರುಷನಿಗೆ ರೂಪಿಲ್ಲ ಗುರು ಗುಹೇಶ್ವರ ಬಲ್ಲ ಶಂಭುಲಿಂಗ || ೫ ||

## ಶ್ರೀ ಗುರುಸಿದ್ಧನ ತತ್ವ.

ತಿಳಿದೋಡ ಮರ್ಮವ ಹೇಳಿ | ಇದು ಕಳಹಂಸನಹುದು ಬಲ್ಲವರುಕೇಳಿ ಶಿರದೊಳು ಮನೆಮಾಡಿಹುದು | ಒಂದಿದೆರಡಾಗಿ ವಳಹೊರಗಡೆ ಎಡೆಯಾಡುತಿಹುದು,ತರಣೀಂದುಗಳನೆ ನುಂಗುವುದು ಕೂಡುತೆಯರಗಿನ ಬೊಂಬೆಯಂತಿಹುದು ||೧|| ಎಡಗಡೆಯೇರಿ ತಳಿಯುವುದು | ಬಲಗಡೆ ಮೇಲಕ್ಕೇರುವುದು | ಎಡಬಲವಳದು ಕೂಗುವದು | ಬೇರೆಂದಲೆಲಾಂತುತಿರದಿ ಕೂಗುವದು || ಮೂರು ರೂಪಾಗೆ ತೋರುವುದು | ಆದಿಮೂಲನೆ ತತ್ವಕ್ಕೆ ತಾಮಸವಹುದು ಅರನೆನೆರೆಯೊಳಾಡುವರು | ಧೀರ ಶ್ರೀಗುರು ಸಿದ್ಧತಾನಹುದು || ೩ ||

## ಗಂಗಾಧರನ ತತ್ವ.

ಯಾಗೆ ಮುಕ್ತನಾಗಬೇಕಣ್ಣಾ | ಈಗಾದಮೇಲೆ ಜೀವ ಮುಕ್ತನಾಗ ಬೇಕಣ್ಣಾ||ಯಾಗೆಮುಕ್ತಾನಾಗಬೇಕು ಈಗತಾಮಸದೊಳಬಿದ್ದುಹೋಗುವ

ಕಾಲಕ್ಕೆ ಇನ್ನು ಅಂಗನೊಡನೆನಂದರಿಲ್ಲ॥ಪ॥ಇಂದೆ ಬಹುಕೊಲೆಗೆಬಿದ್ದೆ ಲ್ಲೊ ಕತ್ತಲೆಗೆ ಸಿಲುಕಿ ಮುಂದೆ ಕೊಳಕು ಬೀಳುತೀಯಲ್ಲೊ।ಹಿಂದೆ ಥೀರ್ಥನಾಚ ಕಿಲ್ಲದೆ ನೊಂದು ಕಣ್ಣೀರಾಕದಂತೆ। ಮುಂದೆ ಹೇಳುವ ಸಮುದ್ರವಾಗಿದೆ ಸಂದಮತಿ ನಿನಗೇನು ಬೇಕು ॥೧॥ ಯಡ್ಡತನಗಳ ಮಾಡಬ್ಯಾಡಣ್ಣಾ।ಬಲ್ಲ ವರು ಕೇಳಿ ದೊಡ್ಡಗುರುಗಳ ಸೇರಬೇಕಣ್ಣಾ।ಅಡ್ಡಬರುವೋ ದುರ್ಗುಣಂಗಳ ಗೊಡ್ಡುಕುರಿಯಮಾಡಿ ಕಡಿದು ಅಡ್ಡಗಟ್ಟಿನ ನಟ್ಟನಡುವೆ ದೊಡ್ಡಗವಿಸೇರ ಬೇಕು ॥೨॥ ದೂರಬ್ಯಾಡ ಮಾತುಕೇಳಣ್ಣಾ। ಸುಳ್ಳಲ್ಲವಣ್ಣ ಘೋರಪಾಪಕೆ ಬೀಳುತೀಯಣ್ಣ । ಆರುಚಕ್ರದಲ್ಲಿ ಹಂರನೇರಿಸಿ ಭ್ರೂಮಧ್ಯದಲ್ಲಿ । ಸೇರಿ ಗಂಗಾಧರನ ಬೆಳಕು ತೋರುತಿದೆ ನೋಡಿರಣ್ಣಾ। ಯಾಗೆಮುಕ್ತನಾಗಬೇಕು॥

## ಮನಪುರ ತತ್ವ.

ಮಾಯಾಪುರವನು ನಿನಗೆಹೋಗಲಿಲ್ಲಆರುವಾಗಲಿಲ್ಲ।ವಿಚಾರಿದವುನ್ಮನೆ ಸೇರಲಿ ಹರನ ಕಾಣಲಿಲ್ಲ ॥ಪ॥ ಪುಂಡುಗಾರಗಂಡನಿಗೆ ಮೊರೆಯುಲಿಲ್ಲ।ಕರ್ಮ ಅರಿಯಲಿಲ್ಲ।ಭಂಡನಾಗಿ ಭವದೊಳು ಬೀಳ್ವರಿಲ್ಲ।ಕುಲವೆಲ್ಲ॥೧॥ ಸಾಧುರತ್ನರು ಹಂ ಸಂಗವಿಲ್ಲ। ದ್ವಂದ್ವಹೋಗಲಿಲ್ಲ। ಮದನೋಹಕ್ಕೆ ಸಿಲ್ಕಿಬಳಲ್ದೆಯಲ್ಲ। ಕಮುಕಳಿವೆಯಲ್ಲ॥೨॥ಗುರುವಾಕ್ಯ ವಿಚಾರೋದಿಲ್ಲವೆಂದು।ವಚನಕೊಟ್ಟೆ॥೩॥

## ಮಹಂತೇಶನ ತತ್ವ.

ನಾನಿತ್ತಎಳೆದರೆ ತಾನತ್ತಎಳೆವುದು ಇನ್ನೇನಿನ್ನೇನು । ಜ್ಞಾನವಿಲ್ಲದ ಕೆಲಸ ಸಾಧನವಾಗದು ಇನ್ನೇನಿನ್ನೇನು ॥ ಪ ॥ ಮುಪ್ಪುರಿಗೆಯನುಗೂಡಿ ಮುಗದಾಣ ಹಾಕಿದ ಇನ್ನೇನಿನ್ನೇನು । ಅದು ತಪ್ಪಿಸಿಕೊಂಡೆನಗೆ ಸಿಕ್ಕದೆ ಓಡಿತು ಇನ್ನೇನಿನ್ನೇನು ॥೧॥ ಹಸುರುಹುಲ್ಲನೆ ಕಂಡು ಬಿಸಲೊಳು ಮೆಯ್ಯು ವನು ಇನ್ನೇನಿನ್ನೇನು। ಆಸವಲ್ಲದಕೋಣ ಕೊಸರಿಕೊಂಡೋಡಿತು ಇನ್ನೇ ನಿನ್ನೇನು ॥ ಮೂರಾರು ಕೋಣದೊಳು ವಿಚಾರಿದಕೋಣೆದು ಇನ್ನೇನಿನ್ನೇನು ನಮ್ಮ ಧೀರ ಮಂತೇಶಗೆ ಮಾರಿಬಿಟ್ಟನು ಕೋಣ ಇನ್ನೇನಿನ್ನೇನು ॥ ೩ ॥

## ತತ್ವ.

ಗುರುವಿನ ಮಹಿಮೆಯು ಗುರುಭಕ್ತರೆಬಲ್ಲರು ಚಂದವಾಮಾ।ಮೂಢ ನರರೇನು ಬಲ್ಲರು ನಡುರಂಗಜೋತಿಯ ಚಂದವಾಮಾ ॥ಪ॥ ಕದರುಗಾತರ ಮರ ಕುದುರೆಗಾತರ ಹುವ್ವು ಚಂದವಾಮಾ । ಒಂಟೆಗಾತರ ಕಾಯಿ ಆನೆ ಗಾತರ ಹಣ್ಣು ಚಂದವಾಮಾ। ಕಣ್ಣಿಲ್ಲದಾತನು ಕಂಡಾನು ಆಮರ ಚಂದ

ಮಾವು । ಕೈಯಿಲ್ಲದಾನು ಕೊಯ್ದನು ಆ ಹಣ್ಣು ಚಂದವಾವು।ತಳವಿಲ್ಲದ
ಪುಟ್ಟೇಲಿ ಇಟ್ಟಾರು ಆ ಹಣ್ಣು ಚಂದಮಾವಾ।ಶಿರವಿಲ್ಲದಾತನು ಹೊತ್ತಾನು
ಆ ಪುಟ್ಟೀ ಚಂದಮಾವಾ।ಸತ್ತುಹುಟ್ಟುವಸಂತೇಲಿ ಇಟ್ಟರುಆಹಣ್ಣುಚಂದ
ಮಾವಾ । ಮರದಲ್ಲಿ ಮರಹುಟ್ಟಿ ಮರಮಾಯವಾಯಿ ಚಂದಮಾವಾ ।
ನಮ್ಮ ಹಾಳು ಕನ್ನಡದಾಸ ಹಾಕಿದ ವುಂಡಿಗೆ ಚಂದಮಾ । ಅರ್ಥವಿಲ್ಲ
ದಾತ ಬೆದಮಾಡಿದನು ಹಣ್ಣು ಚಂದಮಾವಾ । ಮೂಗಿಲ್ಲದಾತನು ಮೂಸಿ
ನೋಡಿದ ಹಣ್ಣು ಚಂದಮಾವಾ । ನಾಲಿಗಿಲ್ಲದಾತ ರುಚಿನೋಡಿದನುಹಣ್ಣು
ಚಂದಮಾವಾ । ಅಂಗಳಿಲ್ಲದಾತ ನುಂಗಿದ ಹಣ್ಣು ಚಂದಮಾವಾ ॥ಗುರು॥

ಓಹೋಹೋಓಗರುಡಗುರುಸ್ವಾಮಿ ಆಹಹಾಇದಿಯೇಮೋಆಶ್ಚರ್ಯ
ಮಾಯರ್ಾ ॥ ಪ ॥ ಕಂಟಿಮಿಂಟಿಕಿನಡುಮ ಮಾಯಂಬುಲೋನ । ಘಂಟ
ನಾದಾಂಬಾಯ ಇಂಟಿಲೋಬಲನು।ಮಂಟಿಮಂಡೇನು।ಜೂಡಿಮರಿಜೂಡ್ರ।
ಜಂಟಸೆ ಪರುಷಮುಲು ಜಟ್ಟಿಕೂರಿರ್ಸ।ಕುರಿಸಿನಪ್ಪುಡು ಚೆಲುವುಕುದುರು
ಕೋನಿ ಸಿಂಡ್ರ ಚೆರುವುಕಟ್ಟಿ ಕೋತಿ ಚಲ್ಲಾಟಮಾರ್ಡ । ಅಂದುಲೋನ
ಆ ಕೋತಿ ಆಟ ಸಾಧಿಂಚೆ । ಸಂತೋಷಮುಗ ರತ್ನಸೌಖ್ಯಮ್ಮೆ ನಿಲಚೆ ।
ನಿಲಚಿನಪ್ಪುಡೆ ಪರಮುಸುಖಮಾಯರ್ । ಶ್ರೀಕರಂಬುನ ಭಾಗ್ಯಲಕ್ಷ್ಮಿ ಮಿತ್ರಾ
ಆಯರ್ । ಓಹೋಹೋ ಓ ಗುರಡ ಗುರುಸ್ವಾಮಿ ॥

## ವೇಮಣ್ಣನ ತತ್ವ.

ಭಯಮೆಂದುಕೊ ಮನಸಾ । ಇಂಕಮಾದ ಮನಕು । ಭಯಮೆಂದು
ಕೋ ಮನಸಾ । ನಯನಮಂದುನ ನಯನುಮುಗೆನುಂಡು ಚಿನ್ಮಯುಮು
ನ್ನಾಡು । ವೇದಾಂತಪುರವಂನ ವೆಲಗುನ ವೇಮನ್ನ ಸದ್ಗುರು ದಯುಗಲಿಗೆ
ಕೊಂಡಕೆಕ್ಕಿನಕಾ ॥೧॥ ವೀರಮುನ ಗಂಭೀರ ರೇಚಕಪೂರಕಕುಂಭಕಾನೇಕ।
ಚಿತ್ಕಳೀತಾರಕಾಬ್ರಹ್ಮತ್ವಮು ಶೃಂಗಾರಮುಗ ಸಾಧಿಂಚಿಪೇಕಾ । ರಕ್ತಿಲೇನಿ
ಪ್ರಪಂಚಮುನೆವಿರಕ್ತಿಚೆಂದಾನಂದಮಯುಮುಗಾಶಕ್ತಿ।ಮಾಯಾಲದ್ರುಂಚಿಚಕ್ಷು
ಲಮುಕ್ತಿಕಾಂತನುಜೂಪಿಂಚನಕಾ॥೨॥ನೀವುನೀವ್ಯೆನೇನುನೀವ್ಯೆ ತಾನುತಾನ್ಯೆ
ತನ್ನುಮರಚಿ।ಸದಾನುದಯ ಭ್ರೂಮಧ್ಯಮುನಪ್ರಧಾನಮ್ಯೆಕೂರ್ಚುನ್ನ ವೆನಕಾ॥
॥೪॥ ಧರನಚಿತ್ತೂರಿನಾಥ ಘೆರಕರಿನರದುದಿಟವಿಟವದಲಗನು । ಗುರುವರನಳ
ಸಿಂಹದಾಸುಲು ಶಿರಸಪ್ಪೆನ ಕೊನ್ನವೆನಕಾ ಭಯಮೆಂದುಕೋ ಮನಸಾ॥೫॥

## ಅನುಭವ ತತ್ವ.

ಅನುಭವಿಆಗಬೇಕಣ್ಣಾ।ಆತ್ಮವನು ಅರಿತವನೆ ಪರಮಾತ್ಮ ಮುಕ್ಕಣ್ಣ
ಓದು ಕೇಳುವತಾನಲ್ಲ । ಗಾಡಿಮನುಜರಿಗರುಹಿಲ್ಲ । ಆತ್ಮಭೇದ ತಿಳಿದನೆಸಹ
ತಾನಲ್ಲ॥ವೇದಶಾಸ್ತ್ರಗಳನೀಓದಿ । ಬರಿಗೆಭೇದವನುಮಾಡಿಪರದ್ರೋಹಿಯಾದಿ
ಓದಿಯುಚ್ಚರಿತು ನೀಕ್ಷಣವನೋಡಿ।ತತ್ವ ಓದಿಮುಂತವನೆಅಜ್ಞಾನಪರಾದಿಅನು
ಭವಿ ಆದರೆಏನುನಿನ್ನತನುವುಮರತವನೆಅಜ್ಞಾನಪರಾದಿ।ಅನುಭವಿಆದರೇನು
ನಿನ್ನ ತನ್ನನು।ಮುಂತುಶಿವ ಧ್ಯಾನದೊಳಿಹನು।ಘನಗುರುನಾಮಲಿಂಗಾನು।ಆತ್ಮ
ಅರುವಾನು ತಿಳಿದರೆ ಲೋಕದ ಗೊಡವೇನು।ಅನುಭಾವಿಯಾಗಬೇಕಣ್ಣಾ ॥

## ಆರೂಢ ತತ್ವ.

ಗುರುವಿನ ಕರುಣದೊಳು ಅರುವಿನೊಳು ಅರುವಾಗಿಯಿತ್ತು ಚಂದ
ಮಾಮಾ । ಅರುವಿನ ಮರೆವೆಯೊಳು ಒಂದಿರುವೆ ನುಂಗಿತು ಲೋಕ ಚಂದ
ಮಾಮಾ । ಕುಂಡಲಿಸರ್ಪಭೂಮಂಡಲಕ್ಕಿಳಿದಿತುಚಂದಮಾಮಾ।ಆದರಂಡ
ಲೇಶನುಬಲ್ಲ ಮಂಡೆಯೊಳಮೃತ ಚಂದಮಾಮಾ ॥೧॥ ಗಂಗೇತೀರದಿವಾದ್ಯ
ಲಿಂಗನ ಗುಡಿಯದೆ ಚಂದಮಾಮಾ । ಆಲಿಂಗನ ಗುಡಿಯೊಳಾಖಂಡ ಬೆಳಗು
ತಿದೆ ಚಂದಮಾಮಾ ॥ ೨ ॥ ಪರವಶದೋಳಗಿದೆ ಪೂರ್ಣಚಂದ್ರನಕಳೆ ಚಂದ
ಮಾಮಾ । ಪರಮಆರೂಢಕೊಂಡಾರ್ಯಸದ್ಗುರು ಬಲ್ಲ ಚಂದಮಾಮಾ॥೩॥

## ಸಿದ್ಧರ ತತ್ವ.

ಸುಮ್ಮನಿರು ಕಂಡ್ಯಾನಾಲಿಗೆ । ವಟ್ಟರಾಡಿಕೊಳ್ಳಲಿಬೇಡ ನಾಲಿಗೆ ॥
ನೆಂಟರೊಳ್ಳೆವರೆಂದು ನಾಲಿಗೆ । ನೀನು ಗಂಟು ತೋರಲಿಬಾಡ ನಾಲಿಗೆ।ನೆಂಟ
ರಿಗು ನಿನಗೂ ತುಂಟಾಟಬಿದ್ದರೆ । ಗಂಟು ಮುಳುಗೀತಯ್ಯಾ ನಾಲಿಗೆ।ಹೆಣ್ಣು
ವಳ್ಳೇದೆಂದು ನೀನುಕಣ್ಣುಹಾಕಲಿಬ್ಯಾಡ ನಾಲಿಗೆ।ಹೆಣ್ಣಿಲ್ಲದೆಯಿದು ಎಡತಲ
ಮೃತ್ಯುವು ನಿನ್ನಲ್ಲಿ ನಿಂತಿಳಿಕೊನಾಲಿಗೆ।ಬುದ್ಧಿಹೇಳಿದರ್‍ಯಾಡೆನಾಲಿಗೆ।ನೀನು
ಯುದ್ಧಕ್ಕೆ ಹೋಗಬ್ಯಾಡನಾಲಿಗೆ।ಸಿದ್ಧಪ್ಪನೆಂಜೋನು ಶಿವದೊಣ್ಣೆತಕೊಂಡು
ರುಬ್ಬಾಡಿ ವಡೆದಾನು ನಾಲಿಗೆ । ಸುಮ್ಮನಿರುಕಂಡ್ಯಾ ನಾಲಿಗೆ ॥

## ವೈರಾಗ್ಯ ತತ್ವ.

ಊರಿಗೇ ನಾನೋಗಬೇಕಣ್ಣ । ದಾರ್‍ಯಾವುದಣ್ಣ । ಊರಿಗೆ ನಾನೋಗ
ಬೇಕಣ್ಣ ॥ಪ॥ ಊರಿಗೆ ನಾ ಹೋಗಬೇಕು । ದಾರಿಯುನನಗೆ ತೋರಬೇಕು
ಮಾರಹರನ ಪಾದದಲ್ಲಿ ಸೇರಿ ಮುಕ್ತನಾಗಬೇಕಣ್ಣ । ೧॥ ಹತ್ತು ಗ್ರಾಮ

ಸುತ್ತಬೇಕಣ್ಣ । ಮತ್ತೆಂಟುಗ್ರಾಮವ ಬಿಟ್ಟು ಮುಂದಕೆ ನಡೆಯಬೇಕಣ್ಣ ಹತ್ತಲಿರುವೋ ಹಳ್ಳಿಯೆಂಟನು । ಹತ್ತ ಸೇರಬೇಡನೀನು। ಚಿತ್ತದೊಳಗೆನೋಡಿ ಕೊಂದು ಇತ್ತ ತಿರುಗಿ ಬಾರದಂತೆ ॥ ೧ ॥ ಭಕ್ತಿಮಾರ್ಗದಿ ನಡೆಯಬೇಕಣ್ಣ। ಈ ಮುಕ್ತಿಯೆಂಬೊ ಶಕ್ತಿಯನ್ನು ಕೂಡಬೇಕಣ್ಣ । ವಿರಕ್ತಿಯಿಂದ ವಿಚಾರ ವಿಡಿದು ವಿರಕ್ತಪಾದವ ಪೂಜಿಸಿ ಭಕ್ತಿಶೇಷವನ್ನು ಸವಿದು। ಇತ್ತ ತಿರುಗಿ ಬಾರ ದಂತೆ ॥೨॥ ಮೂರುದಾರಿಯ ಬಿಡಲುಬೇಕಣ್ಣ । ವೈರಾಗ್ಯವೆಂಬೋ ಜ್ಞಾನ ಮಾರ್ಗದಿ ನಡೆಯಬೇಕಣ್ಣ। ಆರುಅಳಿಯದಂತೆ ಎರಡು ಚಂದ್ರಸೂರ್ಯಗಿರಿಯ ಮಧ್ಯದಿ । ತೋರಿಪೋತ ನೋಡಿದರೆ ತಾರಕಾಬ್ರಹ್ಮವು ತೋರ್ಪುದು ॥೩॥

## ಶಂಭುಲಿಂಗ ತತ್ವ.

ನಿಂತು ಮಾತನಾಡಬೇಕೆಲೆ ನಾರಿ । ಇದು ಸಂತೆಕೂಟವು ಕಾಣೆ ಎಲೆ ನಾರಿ । ಪ॥ ಚಿಂತೆಯನಳಿದು ನೀ ನಿಶ್ಚಿಂತೆಯೊಳ್ಳ್ಯಾವಾಗ। ಕಂತುಪಿತನಪಾದ ಕಮಲದೊಳು ಬೆರಿಯಾದೆ ॥ಅ॥ ಅಪಾಯಪಾಶಕ್ಕೆ ಸಿಲ್ಕಿ ಮರುಳಾಗಿ। ನಿನ್ನ ಕಾಯವನಂಬಿನಕೇಡಾಗಿ । ಸಹಾಯವಾಗಿರುವಂತೆ ಸದ್ಗುರು ಪಾದಸ್ನೇಹ ದಲ್ಲಿದಂತೆ ಕಾಣಿಸಬೇಕು ॥೧॥ ಮದಮತ್ಸರವ ನಂಬಿ ಮರುಳಾಗದೆ । ನಿನ್ನ ಹೃದಯ ಸುಖ ಚಿಂತೆಬಿಡದೋದೆ।ಸದಮಲಜ್ಞಾನದ ಸತ್ಯದೊಳಿದ್ದರಮೃತ ವಾದ ಗುರುವಾಕ್ಯ ಮುಕ್ತಿ ತೋರಿಸುವುದು ॥೨॥ ಆಶೆಪಾಶೆಗೆ ಶಿಲ್ಕಿಅಳದಿರು। ಇನ್ನು ಮೋಸಹೋಗಿ ನೀನು ಕೆಡವಿರು । ಸಾಸಿರನಾಮ ತದ್ಭಕ್ತವಡೆಯನಾ ದಾಸನದಾಸಿಗೆ ದಾಸನೀನಾಗದೆ ॥೩॥ ಈಕ್ಷಣತ್ರಯದೊಳು ಹಿಗ್ಗದೆ ಮುಂದೆ ದೋಷ ಬಂದೀತೆಂದು ಬಿಡಿದೋಡೆ । ಶೇಷಭೂಷಣನಾಡ । ಶಂಭುಲಿಂಗನ ಪಾದ । ಶ್ರೇಷ್ಠವೆಂದೇ ನೀನೆಣಿಸದೋದೆ ॥೪॥ ಮನದಲ್ಲಿ ಮಮತೆಯ ಮರ ತೋರಿ ಇಂತಹುದುಗುರುವುದರದಲ್ಲಿ ಸ್ಥಿರವಾಗಿ। ಅನುದಿನದೊಳುಕಂಡುಗುರು ಸೇವೆಯೋಳ್ ಬೆರತು । ಘನವಾದ ಪದವಿಯೊಳ್ ಪ್ರಣವ ಸೇರಿಸಬೇಕು ॥

## ಕಂಬಳೇಶನ ತತ್ವ.



ಆರ್ಥಿ ಉಲ್ಲಾಸದಿಂದ ನೀವುನಾವು ಕೂಡಿ ಹೋಗೋಣ ಬರ್ತಿರೇನ್ರಿ ಇಲ್ಲೆಇರ್ತಿರೇನ್ರಿ ॥ಪ॥ ಚಿನ್ನದೋಲೆಯನಿಟ್ಟು ಸೀರೆಕುಪ್ಪಸತೊಟ್ಟು। ಮುನ್ನಿನ ಮೂರ್ತಿಗೊಲಿವ ಲಿಂಗವತೋರಿಸ್ತೇನಿ ಬರ್ತಿ॥೧॥ ಆರುಚಕ್ರದಗಾಡಿಮೂರು ಮಲ್ಲಿನತೇರು । ಮೇಲು ಮಂಟಪದೊಳು ದೇವರನತೋರುಸ್ತೇನಿಬರ್ತಿ॥೨॥ ದೇಶಕ್ಕಧಿಕವಾದಶ್ರೀಶೈಲಪಡಾಲಗಿರಿ ಭಾಷೆಪಾಲಿಪಕಂಬಳೇಶನ ತೋರಿಸ್ತೇನಿ॥

## ಸಚ್ಚಿದಾನಂದ ತತ್ವ.

ಗುರುವಿಗೆ ಒಂದು ಶರಣಾರ್ತಿ । ಗುರುಭಕ್ತರಿಗೊಂದು ಶರಣಾರ್ತಿ ಸಾಧನೆ ನಾಲ್ಕನು ಸಾಧಿಸುತಿರುತಿಹ ಸಾಧಕರಿಗೆ ಒಂದು ಶರಣಾರ್ತಿ। ವ... ವರ್ಜಿಸಿ ಶೋಧನಗೈದಿಹ ಉತ್ತಮರಿಗೆ ಒಂದು ಶರಣಾರ್ತಿ ॥೧॥ ಯೋಗಿ... ಳದ್ದಲ್ಲಿ ಯೋಗ್ಯರು ಆಗಿಹ ಯೋಗಿಗಳಿಗೆ ಒಂದು ಶರಣಾರ್ತಿ । ರಂಗವೆಲ್ಲ... ಪೋಗಿ ರಂಜಿಸುತಿಹ ರಂಜಕರಿಗೆ ಒಂದು ಶರಣಾರ್ತಿ ॥೨॥ ದೂಷಣೆಭೂಷ... ಧೂಳಿಮಾಡಿರುವಂಥಾ ದೃಢವಂತರಿಗೆ ಒಂನು ಶರಣಾರ್ತಿ।ಆಶೆಗಳೆಂಬೋ... ನಳಿದು ಇರುತಿಹ ಆನಂದರಿಗೆ ಒಂದು ಶರಣಾರ್ತಿ ॥೩॥ ಪ್ರಪಂಚವೆಲ್ಲವಪ... ರ್ಮಾರ್ಥಮಾಡಿಹ ಪಂಡಿತರಿಗೆ ಒಂದು ಶರಣಾರ್ತಿ।ತಾಪವೆಲ್ಲವನೀಗಿ ತಮ್ಮ... ವರದಿಹ ತಪಸಿಗಳಿಗೆ ಒಂದು ಶರಣಾರ್ತಿ ॥ ೪ ॥ ಜನನ ಮರಣವೆಂಬ ಜ... ರಾನೆ ಕಳೆದಿಹ ಜಗಪತಿಗೊಂದು ಶರಣಾರ್ತಿ . ಚಿನ್ಮಯಾತ್ಮಕ ಸಚ್ಚಿದಾನಂ... ಬೆರದಿಹ ಚಿದ್ರೂಪರಿಗೆ ಒಂದು ಶರಣಾರ್ತಿ ॥ ೫ ॥

## ಪುರಂದರ ತತ್ವ.

ಆರು ಬಾಳಿದರೇನು ಊರನಾಳಿದರೇನು । ತನಗಿಲ್ಲದಾವಸ್ತು ಎಷ್ಟಿ... ರೇನು ॥ಪ॥ ಆದರಣೆಯಿಲ್ಲದೂಟ ಅಮೃತಾನ್ನವಾದರೇನು । ವಾದಿಸುವ ... ಸುತರು ಎಲ್ಲಿದ್ದರೇನು । ಕ್ರೋಧವನು ಬಯಸುವ ಸೋದರಿದ್ದು ಫಲವೇ... ಮಾದಿಗರ ಮನೆಯಲ್ಲಿ ಮದುವ್ಯಾದರೇನು॥೧॥ಅಕ್ಕರಿಲ್ಲದವರಿಗೆ ಮಕ್ಕಳ... ಫಲವೇನು । ಹೊಕ್ಕುಹೊರಡದ ನೆಂಟರಿದ್ದು ಫಲವೇನು।ರೊಕ್ಕವಿಲ್ಲದವ... ಬಂಧುಗಳಿದ್ದು ಫಲವೇನು॥೨॥ಮರ್ಕಟನಕೈಲಿ ಮಾಣಿಕ್ಯವಿದ್ದರೇನು।ಕೃ... ಹಿಂದುಮುಂದೆ ನುಡಿಯುವಾ ಹೆಂಡರಿದ್ದು ಫಲವೇನು॥೩॥ಉಂಡುಂಡು... ಗುವ ಪ್ರಾಯವೇನು।ಗಂಡನಿಲ್ಲದಮೊಲೆ ಯೌವನವಿದ್ದು ಫಲವೇನು।ಪ್ರಜ... ನಾದ ಮಗನಗೊಡಿವೇನುಕೃಷ್ಣಾ ॥೪॥ ಮರಣವಾಗುವಮುನ್ನ ಹರಿಧ್ಯಾ... ಮಾಡಿ । ಪರಲೋಕಸಾಯಜ್ಯ ಪಡೆದುಕೊಳ್ಳಿ । ವರಮೂರ್ತಿ ಪುರಂ... ವಿಠಲನ ನೆನೆನೆನೆದು । ಹರಿಚರಣವ ನಂಬಿ ಸುಖಿಯಾಗೊ ಮನವೇ ಆರು...

## ಆತ್ಮವಿಚಾರ ತತ್ವ.

ಯಂತಾಮದುವೆ ಮಾಡಿಕೊಂಡೆ ಕೇಳೆ ಅಕ್ಕಯ್ಯ । ಅಂಗಳದೊ... ಇರುವೊರೆಲ್ಲ ಬರಿಯ ಬೋಡೇತೇ ॥ ಪ ॥ ಹೆಂಡರೈದುಮಂದಿ ಐದಣಕೆ... ವಂತಾದರು । ಮುಂಡೇರಿಬ್ಬರ ಸುತ್ತಿನಸುರಗೀ ನೀರನೆರೆದಾರು।ಗಂಡಿ...

ಬಿಡಿಗೆರೆಲ್ಲ ಶಾಶೆಸಾಡಿ ಪೋದರಕ್ಕೆ ||೧|| ಕುಂಟಕುರುಡರೆಂಟುಮಂದಿಸೆಂಟರಾದರು | ತುಂಟತನದ ಬೀಗತಿ ಬಂದು ಆಳುತಾನಿಂತಾಳು | ಸುಂಟರಗಾಳಿಯೆದ್ದು ಮನೆಗೆ ಬೆಂಕಿಬಿದ್ದಿತವ್ಮಮ್ಮ||೨||ಸಾಬಯೆಕ್ಕೊವಾಗಬಂದುಕೂಸುಸತ್ತಿತದ | ವೋಸನಾಗಿ ಬಂಧುಬಳಗ ಬರಿದುಆದೀತು | ಈಶಪುರದಕ್ಷರಿಯರಾದವಾಸಮೆಚ್ಚಿದನೆ ಪರಮೇಶ ಮೆಚ್ಚಿದನೆ || ೩ ||

## ನಾಗಲಿಂಗ ತತ್ವ.

ಕರ್ಮಹರನಾಗಬೇಕು | ಕರ್ಮಹರನಾಗಿ ಕಬ್ಬಿಣ ಕರಗುವಾ ತೆರದಿ ಬ್ರಹ್ಮವನು ಪಿಡಿದು ಕರ್ಮವಾ ಕರಗಬೇಕು || ಪ || ತನುವೆಂಬೊ ಕುಲಿಮೆಯಲಿ ಮನದ ಕರ್ಮವನಿಟ್ಟು | ಜ್ಞಾನಾಜ್ಞಾನವೆಂಬೊ ಇಕ್ಕಳವ ಪಿಡಿದು| ನೆನರಸುಂಸ್ತುತಿಯೆಂಬೊ ಕಿಚ್ಚಿಕ್ಕಬೇಕು ||೧|| ಅರಿಷಡ್ವರ್ಗಂಗಳನು ತರಿದು ಇದ್ದಲು ಮಾಡಿ | ಹರನೆಡೆಯೆಂಬೊ ಕುಲಿಮೆಯ ಹೂಡಿ | ನರವಪ್ರಣವದ ಜೋಡುತತ್ತಿಗಳನೇ ಕೂಡಿ | ನೆರೆತನ್ನ ಜನ್ಮದಿ ಜಾತ್ಯವನು ಕರಗುವಡೆ || ಕರಗಿ ರಸವಾಗಿ ನಿಂತಿದ್ದಪನವನೆಕಂಡು ಪರಮಯೋಗದಿ ಆತ್ಮ | ನರುತಿಹ ತಿಳಿದು ಕರುಣಾತ್ಮನೊಳು ಬೆರೆದು | ಕರುಣಯತಿಗಳು ಪ್ರಿಯಕರಸ್ಥಳದ ನಾಗಲಿಂಗರಾಯಾ ||

## ಆತ್ಮವಿಚಾರದ ತತ್ವ.

ಧನವಗಳಿಸಬೇಕಿಂತಾದ್ದು ನರಜನರಿಗೆ ಕಾಣಿಸದಂಥಾದ್ದು|ಅನುದಿನ ಹರಿಹರಬ್ರಹ್ಮಾದಿಗಳೆಲ್ಲಅಹುದಹುದೆಂಬಂತಾದ್ದು||ಪ|| ಕೊಟ್ಟರೆತೀರದಂತಾ ತನ್ನ ಬಿಟ್ಟು ಹೊರಗೆ ಹೋಗದಂತಾ | ಬಚ್ಚಿಟ್ಟ ಗಂಟನು ಬೈಲೊಳಗಿಟ್ಟರೆ ಮುಟ್ಟಬಾರದಂತಾ ||೧|| ಕರ್ಮವು ಬಾರದಂತಾ | ನಿಜಧರ್ಮ ತೋರಿಸುವಂಥಾ | ನಿರ್ಮಲವಾದ ಮನಸ್ಸಿಗೆ ದಾನಧರ್ಮಕ್ಕೆ ಮೀರಿದಂತಾ||೨||ಮರವೆಯತೋರದಂತಾ | ನಿಜದರಹಿನೊಳಗೆ ಇರುವಂತಾ | ಗುರುಬಸವನ ಘನಧಜಕರ ಕಣ್ಣಿಗೆ ತಪ್ಪಿಲ್ಲದೆ ತೋರುವಂತಾ | ಧನವಗಳಿಸಬೇಕಿಂತಾ || ೩ ||

## ಚಿದಾನಂದರ ತತ್ವ.

ಊರದೇವರ ಮಾಡಬೇಕಣ್ಣಾ|ತನ್ನೊಳಗೆ ತಾನು ಊರದೇವರಮಾಡಬೇಕಣ್ಣಾ ||ಪ|| ಊರುದೇವರುಮಾಡುಯೆಂದು ಸಾರುತಿದೆ ಹಗಲು ಇರುಳು ದ್ವಾರಕೇಳೊಂಭತ್ತು ಮುಚ್ಚಿಯೇರಿಸೀ ಭ್ರೂಮಧ್ಯದೊ || ಅ || ಎಪ್ಪಯುಗಳು ತೀರಿಹೋಯಿತಣ್ಣ | ತಾವಾರುಮಾಡದೆ ಕಷ್ಟದಿಂದನೊಂದೆಕಾಣಣ್ಣ|

ಆಷ್ಟಮದದ ಕಂಭನಿಲಿಸಿ ಕಟ್ಟಿಚಪ್ಪರಗಳನ್ನುಹಾಕಿ । ಶಿಷ್ಟಿದೇವರ ತಂ
ನಿಲಿಸಿ । ದುಷ್ಟಕೋಣವ ಶಿರವತರಿದು॥೧॥ತರ್ಕವೆಂಬೊಕ್ಲೇಶಕುರಿಯಣ್ಣ
ಅವರನ್ನು ಹಿಡಿದು ಕಟ್ಟಿತಲೆ ಚೆಂಡಾಡಬೇಕಣ್ಣಾ।ಮುಟ್ಟಿಬಂದ ಕುರಿಗಳನ
ಕಟ್ಟಿತಲೆಯ ಚಂಡಿಹಾಕಿ । ಹರಿದುತಿರುವೊ ಕೋಳಿಯನ್ನು ತರಿದು ಸೂ
ಹಾಕಬೇಕು ॥೨॥ ತನುವೆಂಬೊದೊಂದುಮೇಕೆಹೋತಣ್ಣ।ಅದಕೆತಕ್ಕಜ್ಞಾ
ನೆಂಬೊ ಹೋತರಾಜಣ್ಣ । ತಾನುಯೆಂಬೊ ಚಾಟಿಹಿಡಿದು। ಹೀನಹೋತ
ಸೀಳಿಬಿಸುಟು । ಜ್ಞಾನಗುಡಿಸಲು ಸೂರೆಗೊಂಡು । ತಾನು ಬೆಳಗುವೊ
ಜ್ಯೋತಿನಿಲಿಸಿ ॥ ಸತ್ತಹೆಣ್ಣನನೋಡುವೆಯಲ್ಲೋ । ನೀ ಘಳಿಸಿದಂಥಾಬು
ಯನ್ನು ವಯಿದುಉಣ್ಣಲ್ಲೋ । ಮೃತ್ಯುವಿನಬಾಯಿಗೆ ನೀನು ತುತ್ತು ಆ
ಹೋಗಬ್ಯಾಡ । ಹೊತ್ತಾಗಿ ಗುರುವಿನ ಭಕ್ತಿಯಿಂದ ಹತ್ತಿನೋಡೋ ಗುಡ
ವನ್ನು ॥ ಮುಂದೆ ಇಂಥಾ ಜನ್ಮಕಾಣಣ್ಣಾ । ದೊರಕಾದುಕೇಳು ಮಂದಮ
ಬೇಡ ಕಾಣಣ್ಣ । ಇಂದಿನಾಜನ್ಮ ಕಷ್ಟವಾಗಿತ್ತು ಮುಂದಿನ ಹಮ್ಮಾ
ಮುರಿದು । ತಂದೆ ಚಿದಂಬರನಪಾದವಹೊಂದಿ ನೀನು ಮುಕ್ತನಾಗು ॥

ರಾಗ—ಕಲ್ಯಾಣಿ ಚಾಪುತಾಳ

ದಾಸನತವೆನಾನಿನ್ನಾ।ಲಕ್ಷ್ಮೀರನ್ನಪೋಷಣೆಮಾಡೊಯನ್ನಾ॥ಕೇಶವ
ಕೃಷ್ಣದಾಮೋದರ ಗೋವಿಂದ । ವಾಸುದೇವ ಅನಿರುದ್ಧ ಮುಕುಂದಾ
ಮಾಧವವಿಷ್ಣುತ್ರಿವಿಕ್ರಮವಾಮನ।ಶ್ರೀಧರಹೃಷೀಕೇಶನಾರಸಿಂಹ।ಯಾದ
ರಾಮ ನಾರಾಯಣ ಪ್ರದ್ಯುಮ್ನ । ವೇದೋದ್ಧರ ಪದ್ಮನಾಭ ಸಂಕರ್ಷಣ
ಹರಿಜನಾರ್ದನ ಆಚ್ಯುತ ಆಧೋಕ್ಷಜಪುರುಷೋತ್ತಮಮಧುಸೂಧನನೆಗು
ನರಹರಿಮುಕ್ತರ । ಧುರಗಿರಿಧರ ಪರಮೇಶ ವೇಣುಗೋಪಾಲಪ್ರಭು ॥ ೩

ರಾಗ—ಕಾಂಭೋದಿ ಝಂಪೆತಾಳ

ನರನೀನು ರಥದಿ ನಾರಾಯಣನುನೀನು । ಸುರರಿಗಮೃತವುಣ್ಣಿಸಿರು
ಸೀನೀನು ॥ಪ॥ ಕುರಹದಲಿ ಫಲುಗುಣಗೆ ಲಲನೆ ಸೌಭದ್ರೆಯಳ।ಚಲು
ಕೆಯು ಮನದಿ ಕಲ್ಪಿಸಿ ಮಯ್ಯಮರದು । ಬಳಲುತಿರುವಾಗ್ಯೆ ತಾ ಸತಿಯಾ
ಮೈದುನನ । ವಲಸಿನವನಲ್ಲಾ ಭಕ್ತರಾಧೆನಲ್ಲಾ ॥೧॥ ಬ್ರಹ್ಮಗೋಧನ ತನ
ಲೈಕಕ್ಕೆತಂದವನ । ಹಮ್ಮುಹಣಗೆಡಿಸಿ ಹಲರೂಪವಾಂತು । ತಮ್ಮನಾ ಬ
ರಾಮಣ್ಣ ನೀನಾರೆಂದು । ಗುಮ್ಮಾಟವಾಡಿ ಅಸುರರ ಬಡಿದ ರಂಗಾ ॥ ೨

ಜಯುರಥದಲಿ ಮುಕುಟಧ್ವಜ ವಾಯುತನಯುಮನ । ಭಜನಭಕ್ತಿಗೆ ಸೆಳೆದ
ಖಿಳ ಬಾಂಧವ । ಸುಜನರಕ್ಷಕ ನರಹರೇಶ್ವರನೆ ನೀನೆ ಗುರು । ನಿಜವಾಗಿ
ಮುರಲಿ ನೆಲಸಿ ನಿಂತಿರುವ ॥ ೩ ॥

ರಾಗ—ಜೋಗಿ—ಸಾವೇರಿ, ಆದಿತಾಳ

ನೀಡಣ್ಣ ಮನದಿಷ್ಟ । ಬೇಡುವೆಯುನ್ನೊಡೆಯು । ಕಾಡುವರನುದೂಡಿ
ಮಾಡಿಸು ಕಡಯು ॥ಪ॥ ಮರವಿಂದೆಚ್ಚರವಾಗೆ ಬರುವಾಗ ಶ್ರೀಹರಿಚರಣದ
ಸ್ಮರಣೆಯು । ತರದೆಚ್ಚೆತ್ತು ಪರಿಪರಿವರ್ಣಕೆ । ಗುರಿಯಾದ ದೇಹದ । ಪರಿ
ಯಾದದರಿವೀಗೆ । ವಸನಾಕ್ಷರೂಪ ॥ ೧ ॥ ವಿಷಯುವಾಸನವೆಂಬ । ಕಸವ
ತೆಗೆದು ನಿನ್ನಾ । ಪೆಸರನ್ನ ಪ್ರಾಣವಾನಸಬುದ್ಧಿಗೆ।ಹಸೆಯಾಗೆ ನಿತ್ಯಾನ್ಯೈಮಿತ್ಯ
ವಿಶಿಷ್ಟವ । ನಿನ್ನೊಶಕೇಕೆ ಮಾಡಿಕೊ ವಸುವಂದ್ಯನಂದ್ಯ ॥೨॥ ವೃತ್ತಿಗಳೆಲ್ಲ
ನಿವೃತ್ತಿ ಶ್ರೀನರಹರಿ । ಸ್ತೋತ್ರವಾಗುವಂತೆ । ಮುತ್ತೂರಿನಾ ಉತ್ತಮ ।
ಸ್ತೋಮ । ಮಂದರದಂತರ್ಬಹಿರದಿ।ನರ್ತನಾ ಕೀರ್ತನಾವರ್ತಿ ಶ್ರೀಕೃಷ್ಣ ॥

## ಗಗನಾರ್ಯರ ವಚನ.

ರಾಗ—ಆನಂದ ಭೈರವಿ.

ಒಳ್ಳೇಮಾರ್ಗದಿ ಹೋಗಬೇಕು । ತೊಡಕುಳ್ಳ ಮಾರ್ಗದಿ ಪೋಗದೆ
ನಿಲ್ಲಬೇಕು॥ಪ॥ಗುರುಭಕ್ತರೊಡಗಾಡಬೇಕು।ಹರಿಭಕ್ತರನುಕಂಡು ನಲಿದಾಡ
ಬೇಕು । ಪರಹಿತವನೆ ಮಾಡಬೇಕು । ದುಷ್ಟರಲಿ ದುರ್ಜನರ ಗೋಷ್ಠಿಯು
ಬಿಡಬೇಕು॥ಸ್ತುತಿಸಿ ಭಜನೆಯೊಳಿರಬೇಕು।ತಾನು ಸತತಸ್ಮರಣೆ ಶಾಂತಿಯಿರ
ಬೇಕು । ಹಿತಭಾಷೆಗಳನಾಡಬೇಕು।ತಾನು ಗತಿಯಾನೆ ಪ್ರತಿದಿನದಲ್ಲಿ ಕೋರ
ಬೇಕೂ ॥೨॥ ನಿತ್ಯವಾದುದು ನಂಬಬೇಕೂ ಇಲ್ಲಿ ಮಿತ್ಯವಸ್ತುಗಳೊಳಾಸೆಯು
ಬಿಡಬೇಕು । ನೆತ್ತಿಯು ಪಥವೇರಬೇಕು । ನಮ್ಮ ಸತ್ಯಸಹಜ ಗಗನಹೊಂದ
ಬೇಕು ಒಳ್ಳೇಮಾರ್ಗದಿ ಪೋಗಬೇಕೂ ॥ ೩ ॥

ರಾಗ—ಆನಂದ ಭೈರವಿ

ಬಹುಕಷ್ಟಪಟ್ಟೆನಾ ಭವದಿಸಾಕಿ । ನ್ನಹಹ ಸಾನ್ಯೈಕ್ಯಸಾಗುವೆ ನಿಮ್ಮ
ಪದದೀ ॥ಪ॥ ಹಲವು ಜನ್ಮಂಗಳ ತಂದೂ ಮುಂದೆ ಹಲವು ದುಷ್ಕೃತ ಕರ್ಮ
ಫಲವಿಂದ ಬೆಂದೂ।ಫಲಕಾಮತೃಷೆಯಿಂದ ನೊಂದೂ।ಅಲ್ಲಿ ಕೆಲಕಾಲಸ್ವರ್ಗ
ಮರ್ತ್ಯ ಪಾತಾಳಗಳಿಂದಲೂ ॥೧॥ ಕ್ಲೇಶಪಂಚಕದಿಜಳ್ಳಾಗಿ।ಅಷ್ಟಪಾಶದಳ

ತೆಯ ಬಂಧನಕ್ಕೊಳಗಾಗಿ। ಈಷಣತ್ರಯದಾಸೆಗಾಗಿ। ಮೂರು ವಾಸನ
ೞಲ್ಲಿ ತೊಡಂಗಿಸ್ಕಿದೆನಾಗಿ ॥೨॥ ಪಲ್ಲೆನಾನಿನ್ನು ಜನ್ಮವಾ । ವಲ್ಲೆನೊಲ್ಲೆ
ನಿಹ ಪರಭೋಗ ಸೌಖ್ಯಗಳಾ। ವಲ್ಲೆನಾನಾ ವಿಷಯಗಳಾ । ಯನ್ನ ಸೊ
ಲಾಲಿಸೋ ಗಗನಾರಸುಶೀಲಾ । ಬಹುಕಷ್ಟಪಟ್ಟೆನಾಭವದಿ ಸಾಕಿನ್ನ ಹ
ನಾನೈಕ್ಯನಾಗುವೆ ನಿಮ್ಮ ಪದದಿ ॥

ರಾಗ—ಮುಖಾರಿ, ಝುಂಪೆತಾಳ

ನಾನೇನು ಮಾಡಿದೆನು ನನ್ನಿಂದಲೇನಹುದು। ನೀನೆನ್ನ ಹೃದಯಸ್ಥನ
ಗಿದ್ದು ಹರಿಯೇ ॥ ಪ ॥ ನಾಬರಿದೆ ಹಮ್ಮಿನಾ ಉರುಳಿನೊಳು ನಾವೆಂಬ
ಪರಮ ಪುಸಿಯಭಿಮಾನಕ್ಕೆರಗಿದೆನು। ಹರಿವನೀಹೊಳಗೆ। ದೊಣ್ಣಪ್ಪನಪ್ಪ
ಯೆಂಬ। ಹರಿಯವಲ್ಲದೆ ನೆರವೇರುತಿಹುದೆ ॥೧॥ ಗೊಂಬೆಯಾಟದೊಳು ತ
ಕುಣಿದಾಡುವದೆ ಮರದ । ಬಿಂಬವದು ಸೂತ್ರಧಾರಿಯು ಕುಣಿಸುವಂತೆ
ನೀಬಾಗಿ ಸಕಲ ಬ್ರಂಹಾಂಡ ಪಿಂಡಾಂಡದಲಿ।ತುಂಬಿರ್ದನಾ ಬ್ರಹ್ಮಸ್ತಂಭ
ಸಾ ॥೨॥ ಗೋಡೆಯಿಲ್ಲದ ಚಿತ್ರವುಂಟೆ ನಿಜಪುಸಿಗಳೊಡ । ಗೂಡಿನೀನಿ
ವಿಶ್ವನಾಟಕವನಾ। ಡಿಸುವ ಮುಕ್ತಿ ಪುರ। ಗುರುನರಹರೀಶ್ವರನೆ ಮಾಡೆನ
ಮನದಿಷ್ಟ ಪರಿಪೂರ್ಣನೆ ॥ ೩ ॥

## ತತ್ವದ ಮಂಗಳಾರತಿ.

ಮಂಗಳಾರತಿಯೆತ್ತಿ ಅಂಗನೇಯರೆಲ್ಲಾ । ಸಂಗಯ್ಯ ಬಸವಣ್ಣನಿಗೇ।
ಚೆನ್ನಣ್ಣನಿಗೆ ಮಂಗಳಾರತಿ ॥ಪ॥ ಗಂಗೇಯ ಧರಿಸಿದಾ। ಲಿಂಗಾವತಾರಗೆ
ರಂಗಯ್ಯನೊಳಗಾಡುವಗೇ।ಮಂಗಳಾರತಿ ॥೧॥ ಲಕ್ಷದಮೇಲೆತ್ತೊಂಭತ್ತೈದ
ಸಾವಿರ। ನಿತ್ಯಜಂಗಮಗಿಕ್ಕಿದವಗೇ ಸಿಕ್ಕಿದವಗೇ ಮಂಗಳಾರತಿ ॥ ೨ ॥ ಎ
ಮೂರು ಪುರದೊಳು । ನೆಲಸಿದ್ದ ದೇವಗೆ । ಗುರುಸಿದ್ಧನೊಳಾಡುವಗೇ
ಮಂಗಳಾರತಿ ॥೩॥ ಕರಿಯಾಲಕ್ಕೋಸ್ಕರ ಬಿಳಿಯಾಲೆ ಚಿನ್ನಯ್ಯ । ಬರದ
ತಂದು ಒಪ್ಪಿಸಿದವಗೇ। ಮಂಗಳಾರತಿಯೆತ್ತಿ ಅಂಗನೇಯರೆಲ್ಲಾ ॥ ೪ ॥

ಸಂಪೂರ್ಣಂ.

---

ಶ್ರೀ ವೆಂಕಟಾದ್ರಿ ಪ್ರೆಸ್, ಬೆಂಗಳೂರು ಸಿಟಿ.